# ಜಯ, ಗುರುದೇವ!



ಶ್ರೀ. ಸಾಲಿ ರಾಮಚಂದ್ರರಾಯರು



ಸಂಸ್ಕೃತಿ ಪ್ರಕಾಶನ

ಶ್ರೀನಿಕೇತನ, ಧಾರವಾಡ

೧೯೫೨]  [೧-೪-೦

# ಮುನ್ನುಡಿ

ಶ್ರೀಮಾನ್ ಸಾಲಿ ರಾಮಚಂದ್ರರಾಯರು ಕರ್ನಾಟಕಕ್ಕೆ ಚಿರಪರಿಚಿತರಾದ ಕವಿಗಳು. ಈಗ ಸುಮಾರು ೨೫ ವರ್ಷಗಳಿಂದಲೂ ನಾನು ಅವರನ್ನು ಕವಿಗಳೆಂದು ಬಲ್ಲೆನು. ಅವರ ಕವನಗಳಿಂದ ಅವರ ಜೀವನದ ಸ್ವರೂಪವನ್ನು ಊಹಿಸುವಂತಿದೆ. ಸರಲ ಸುಲಭವಾದ ಪದಗಳ ಜೋಡಣೆಯಿಂದ ಹಳೆಯ ವೃತ್ತ ಪ್ರಾಸಗಳನ್ನು ಉಲ್ಲಂಘಿಸದೆ ಉದಾತ್ತ ತತ್ತ್ವಗಳನ್ನು ರಮ್ಯವಾದ ಶೈಲಿಯಲ್ಲಿ ಉಪದೇಶಿಸುವ ಅನ್ಯಾದೃಶವಾದ ಗುಣವು ಶ್ರೀ. ರಾಮಚಂದ್ರರಾಯರ ಕಾವ್ಯಗಳಲ್ಲಿ ಒಡೆದು ಕಾಣುತ್ತಿದೆ. ಅವರ ಜೀವನವಾದರೂ, "ನಿನ್ನ ಕೈಗೂಸಾಗಿ ನಲಿವೆನೆಂದು। ಸನ್ನುತಾಂಘ್ರೀ; ಸಚ್ಚಿದಾನಂದ, ದೇವಾ ?॥" (ಪುಟ ೬೪), ಎಂದು ಹೇಳಿದಂತೆ ಅಬಾಧಿತ ಪ್ರಮಾಣಗಳಿಂದ ಜ್ಞೇಯನಾದ ಪರಾತ್ಪರ ಶ್ರೀಹರಿ ಪರಮಾತ್ಮನನ್ನು ಕಣ್ಣೆದುರಿಗೆ ನೋಡುವ ಹಂಬಲು "दृष्टिस्तृणीकृतजगत्त्रयसत्त्वसारा।" ಎಂಬಂತೆ ಜಗತ್ತಿನ ನಶ್ವರ ಸುಖಕ್ಕೆ ಮನಸೋಲದೆ, ಬಂದ ಎಡರುಗಳನು ಲಕ್ಷಿಸದೆ, "ಕುಶಲವಿಹುದು ಸಂಸಾರದೊಳು॥ ವಿಶದಾಶಯದ ಸುಧೀರನಿಗೆ॥" (ಪುಟ ೮೬) ಎಂದು ಧೈರ್ಯದಿಂದ ಸಾಗಿ योग: कर्मसु कौशलम्। ಎಂಬ ಗೀತಾಚಾರ್ಯರ ಉಕ್ತಿಯಂತೆ ತತ್ತ್ವಸಾಕ್ಷಾತ್ಕಾರಕ್ಕೆ ಅನುಕೂಲವಾದ ಮನಃಪೂತವಾದ ಆಚರಣೆಯಿಂದ ಪರಿಶುದ್ಧವಾಗಿ "ಇಲ್ಲವೋ ವಿಮಲಮನಕಿಲ್ಲ ಭಯವು। ಬಲ್ಲವರ ಸೊಲ್ಲೊ ಇದು; ನಂಬು ನಂಬು॥" (ಪುಟ ೭೬) ಎಂಬಂತೆ ನಿರ್ಭಯವಾಗಿದ್ದು ಜಿಜ್ಞಾಸುಗಳಿಗೆ ಆದರ್ಶಪ್ರಾಯವಾಗಿದೆ. ಉದಾತ್ತವಾದ ಸುಂದರ ಜೀವನದ ರಹಸ್ಯವನ್ನು ಮತಿಗೆಟ್ಟು ಗತಿಗೆಟ್ಟ ಈಗಿನ ಜಗತ್ತಿಗೆ ತಿಳಿಸುವ ಉದ್ದೇಶದಿಂದ ಇವರು 'ಜಯ, ಗುರುದೇವ!' ಎಂಬ ಈ ಕಾದಂಬರಿಯನ್ನು ಬರೆದಿದ್ದಾರೆ. ಇವರ ಈ ಪ್ರಯತ್ನವು ಅತ್ಯಂತ ಸಮಯಪ್ರಾಪ್ತವಾಗಿದೆ.

ಶ್ರೀ. ರಾಮಚಂದ್ರರಾಯರ ಕವನಗಳಲ್ಲಿ ಇದೇ ಉದ್ದೇಶವಿದ್ದರೂ ಅದರ ಸಾಧನೆಗೆ ಕಾದಂಬರಿ ಈಗ ಅವಶ್ಯವೂ ಪರಿಣಾಮಕಾರಿಯೂ ಆದ ಮಾರ್ಗವೆನಬಹುದು. ಈ ಮನ್ವಂತರದಲ್ಲಿ ಕಥೆ-ಕಾದಂಬರಿಗಳ ಪ್ರಚಾರವು ಹೆಚ್ಚಾಗಿದೆ. ಅವುಗಳ ಮೂಲ ಉದ್ದೇಶವು ಉಚ್ಚತಮವಾಗಿದ್ದರೂ, ಅನಧಿಕಾರಿಗಳಾದ ಲೇಖಕರ ಕೈಯಲ್ಲಿ ಅವು ಈಗ ಹದಗೆಟ್ಟು ಜನರಲ್ಲಿ ಬುದ್ಧಿಭೇದವನ್ನು ಹುಟ್ಟಿಸತೊಡಗಿವೆ. ಆದುದರಿಂದ ಶ್ರೀ. ರಾಮಚಂದ್ರರಾಯರು ಉದಾತ್ತ ಕಥಾ ಸಂದರ್ಭದಿಂದ 'ಜಯ, ಗುರುದೇವ!' ಎಂಬ ಕಾದಂಬರಿಯನ್ನು ಬರೆದಿದ್ದಾರೆ. ಅದರಲ್ಲಿ ಉಚ್ಚಧ್ಯೇಯದ ಬಡತನದ ಸಂಸಾರವು ಸ್ವರ್ಗ ಸುಖಕ್ಕೂ ಮಿಗಿಲಾದುದು ಎಂಬುದನ್ನು ಒಳ್ಳೆ ಹೃದಯಂಗಮವಾಗುವಂತೆ ನಿರೂಪಿಸಿದ್ದಾರೆ. "ರಾಜನು ಶ್ರೀಮಂತರ ಪ್ರತಿನಿಧಿಯಾಗಿರುವಂತೆ ಬಡವರ ಪ್ರತಿನಿಧಿಯೂ ಆಗಿರುವನು. ಇಷ್ಟೇ ಅಲ್ಲ. ಬಹುಸಂಖ್ಯಾಕರಾದ ಬಡವರು ಆತನ ಪ್ರಾಣವು" (ಪುಟ ೪೮), "ಕೊಲ್ಲುವವರು, ಕೊಲ್ಲಿಸಿಕೊಳ್ಳುವವರು, ಕೊಲೆಯಿಂದ ಸ್ವಾರ್ಥವನ್ನು

ಸಾಧಿಸಿಕೊಳ್ಳುವವರು, ಈ ತೋರುತ್ತಿರುವ ವಿಚಿತ್ರತೆಯ ಹಿಂದೆ ಇರುತ್ತಿರುವ ಸೂತ್ರವು ಮತ್ತು ಆ ಸೂತ್ರವನ್ನು ಆಡಿಸುವ ಶಕ್ತಿ ನಮಗೆ ಕಾಣಿಸುವದಿಲ್ಲ. ಇದು ಮನುಷ್ಯನು ತಿಳಿಯಬೇಕಾದ ಮಾತು." (ಪುಟ ೫೪, ೫೫), "ಕಷ್ಟದಲ್ಲಿಯೂ ದೇವನ ದಯೆ, ಸುಖದಲ್ಲಿಯೂ ದೇವನ ದಯೆ ಬೇಕು." (ಪುಟ ೨೭), "ಇನ್ನೊಬ್ಬನಲ್ಲಿ ಶುಭದ ಅಂಶಗಳನ್ನು ಕಾಣುವ ದೃಷ್ಟಿ ನಮ್ಮದಿರಬೇಕು. ಶುಭದ ವಿಕಾಸಕ್ಕೆ ಸೌಕರ್ಯಗಳನ್ನು ಒದಗಿಸುವ ಕಾರ್ಯವು ನಮ್ಮದಾಗಿರಬೇಕು. ಸಮಾಜವು ಸುರಕ್ಷಿತವಾಗಿರುವುದು ಇದರಿಂದ." (ಪುಟ ೬೮), ಇವೇ ಮೊದಲಾದ ತತ್ತ್ವಗಳನ್ನು ಕಥೆಯಿಂದ ಮನದಟ್ಟಾಗುವಂತೆ ಇಲ್ಲಿ ನಿರೂಪಿಸಿದೆ. ಪ್ರೇಮಪೂರ್ಣವಾದ ತ್ಯಾಗವೃತ್ತಿ ಉದಾತ್ತ ಸ್ತ್ರೀಯ—ಗೃಹಿಣಿಯ ಲಕ್ಷಣವೆಂದು ಹೇಳಲ್ಪಟ್ಟಿದೆ. ಇಂಥ ಸ್ತ್ರೀಯರ ತಂತ್ರದಲ್ಲಿ ಸಂಸಾರವು ಸುಖರೂಪವಾಗುವುದೆಂಬಲ್ಲಿ ಸಂದೇಹವಿಲ್ಲ. ಗುರುದೇವನ ಅಧಿಷ್ಠಾನದಲ್ಲಿ ಜಗತ್ತಿನ ಕಲ್ಯಾಣವು ನಿಶ್ಚಯವಾಗಿ ಸಾಧಿಸುವುದೆಂದು ಹೇಳುವ ಈ ಕಾದಂಬರಿ ಪರ್ಯಾಯದಿಂದ ಮಹಾತ್ಮಾ ಗಾಂಧಿಯವರ ಜೀವನವನ್ನು ಸ್ಮರಣೆಗೆ ತಂದು ಕೊಡುವಂತಿದೆ.

ನೀತಿಗೆಟ್ಟು ಮನಬಂದಂತೆ ನಡೆವ ಈಗಿನ ದೈವಗೇಡಿಗಳಾದ ಜನರಿಗೆ ಕಾಲಚಕ್ರದ ಮಹಿಮೆಯ ಅರಿವನ್ನು ಮಾಡಿಕೊಟ್ಟು, ಜಗದಂತರ್ಯಾಮಿಯಾದ ಶ್ರೀಪರಮಾತ್ಮನ ಕೃಪೆಯಿಂದ ಸ್ವಸ್ವ ಕರ್ತವ್ಯನಿಷ್ಠರಾಗಿ ಸುಖಿಗಳಾಗಬೇಕೆಂದು ತಿಳಿಸುವ ಈ ಗ್ರಂಥವು ಶ್ರೀ. ರಾಮಚಂದ್ರರಾಯರಂಥ ಅನುಭವಿಗಳ ಲೆಕ್ಕಣಿಕೆಯಿಂದ ಸಕಾಲದಲ್ಲಿ ಬಂದಿದೆ.

ಶ್ರೀ. ರಾಮಚಂದ್ರರಾಯರ ಭಾಷೆ ಲಲಿತವೂ ಮೃದು ಪದಗಳಿಂದ ಸುಮಧುರವೂ ಆಗಿದೆ. ವ್ಯಾಕರಣ ನಿಯಮಗಳಿಂದ ಬದ್ಧವಾಗಿ ಬಹು ಶುದ್ಧವಾಗಿದೆ. ಒಂದೊಂದು ಶಬ್ದದಲ್ಲಿಯೂ ಅನುಭವದ ರಸವು ಉಕ್ಕಿ ಬರುವುದರಿಂದ ಶೈಲಿ ಹೃದಯಸ್ಪರ್ಶಿಯಾಗಿದೆ. ಗ್ರಂಥದ ಕಥಾಸಂದರ್ಭ, ಉಪದೇಶ, ಭಾಷೆ, ಶೈಲಿ, ಸಮಯ ಅಥವಾ ಪ್ರಸಂಗ ಇವೆಲ್ಲ ಸಾಮಗ್ರಿಗಳು ಅತ್ಯಂತ ಪರಿಪಕ್ವವಾಗಿವೆ. ಇದರಿಂದ ಈ ಹೊಸ ಮಾದರಿಯ ಕಾದಂಬರಿ ಲೋಕಪ್ರಿಯವಾಗಿ ತನ್ನ ಧ್ಯೇಯವನ್ನು ಸಾಧಿಸಲು ಸಮರ್ಥವಾಗುವುದೆಂದು ನನ್ನ ದೃಢವಾದ ನಂಬಿಗೆ ಇದೆ. ಇಂಥ ಅಮೌಲ್ಯ ಗ್ರಂಥಗಳನ್ನು ಬರೆದು ಶ್ರೀ. ಸಾಲಿ ರಾಮಚಂದ್ರರಾಯರು ತಮ್ಮ ಉಳಿದ ಆಯುಷ್ಯವನ್ನು ಲೋಕಸಂಗ್ರಹ ಕಾರ್ಯದಲ್ಲಿ ಕಳೆಯಬೇಕೆಂದು ಅಪೇಕ್ಷಿಸುತ್ತೇವೆ.

**ರಾಘವೇಂದ್ರಾಚಾರ್ಯ ಪಂಚಮುಖಿ,** ಎಂ. ಎ., ವಿದ್ಯಾರತ್ನ.
ಡೈರೆಕ್ಟರ ಕನ್ನಡ ರೀಸರ್ಚ, ಧಾರವಾಡ

---

ನನ್ನ ಪರಮ ಬಂಧು

**ಶ್ರೀ. ರುಕ್ಮಾಂಗದರಾವ ದೇಶಪಾಂಡೆ,** ಎಂ. ಎ. ಇವರಿಗೆ

अकारणमित्राणि सतां चेतांसि ।

ಎಂಬ ಕವಿವಚನದ ಸತ್ಯತೆಯನ್ನು

ನಿಮ್ಮ ಜೀವನದಲ್ಲಿ ನಾನು ಕಂಡೆನು.

# ಪ್ರಕಾಶಕರ ನಿವೇದನೆ



ಜೀವಕ್ಕೆ ಸಂಸ್ಕಾರ ಕೊಡುವಲ್ಲಿ ಸಾಹಿತ್ಯವೂ ಒಂದು ಮುಖ್ಯ ಸಾಧನವಾಗಿದೆ. ಸಾಹಿತ್ಯವು ಸತ್ಯನಿಷ್ಠವೂ ಸತ್ತ್ವಪೋಷಕವೂ ಇದ್ದರೆ, ಅದರ ಉಪದೇಶದಿಂದ ಜನಾಂಗವು ತಿಳಿವಳಿಕೆಯುಳ್ಳದಾಗಿ ಜನರ ನೀತಿಯ ಮಟ್ಟವುಬೆಳೆದು ಸಾಮಾಜಿಕ ವಿಪ್ಲವಗಳು ಕಡಿಮೆಯಾಗುವುವು. ಮತ್ತು ನಾಡುಪ್ರಗತಿಯ ಮಾರ್ಗದಲ್ಲಿ ನಡೆಯಲು ಅನುಕೂಲವಾಗುವುದು.

ಸಜ್ಜನರ ಪ್ರಭಾವಕ್ಕೆ ಒಳಗಾದ ಯಾವ ಮನುಷ್ಯನೂ ತನ್ನ ಜೀವನವನ್ನು ಸಾರ್ಥಕವಾಗಿಸಬಲ್ಲನೆಂಬ ಸತ್ಯವನ್ನು **"ಜಯ ಗುರುದೇವ!"** ಕಾದಂಬರಿ ಸ್ಪಷ್ಟಪಡಿಸಲು ಪ್ರಯತ್ನಿಸುತ್ತಿದೆ.

ಪ್ರಸ್ತುತ ಕಾದಂಬರಿಯ ಲೇಖಕರಾದ ಶ್ರೀಮಾನ್ ಸಾಲಿ ರಾಮ-ಚಂದ್ರರಾಯರು ಮಾನವನು ಒಳ್ಳೆಯವನಾಗಿ ಬದುಕಬೇಕೆಂಬ ಆದರ್ಶವನ್ನು ಸಾಧಿಸಲು ಯತ್ನಿಸುತ್ತಿರುವ ಜೀವಿಗಳು. ಅವರ ಈ ಕೃತಿ ಅವರ ಜೀವನ ವೃಕ್ಷದ ಒಂದು ಪಕ್ವಫಲ. ಇದನ್ನು ಕನ್ನಡ ಓದುಗರ ಕೈಯಲ್ಲಿ ಇಡಲು ನಮಗೆ ಆನಂದವಾಗುತ್ತದೆ.

ಸಂಸ್ಕೃತಿಪೋಷಕ ಗ್ರಂಥಗಳನ್ನೇ ಪ್ರಕಟಿಸಬೇಕೆಂಬ "ಸಂಸ್ಕೃತಿ ಪ್ರಕಾಶನದ" ಬಯಕೆ ಈ ಪುಸ್ತಕದ ಪ್ರಕಾಶನದಿಂದ ಕೆಲಮಟ್ಟಿಗಾದರೂ ಕೈ-ಗೂಡಿದೆಯೆಂದು ನಾವು ನಂಬುತ್ತೇವೆ.

ಶ್ರೀಮಾನ್ ರಾಘವೇಂದ್ರಾಚಾರ್ಯ ಪಂಚಮುಖಿ, ಎಂ. ಎ ವಿದ್ಯಾರತ್ನ ಡೈರೆಕ್ಟರ ಕನ್ನಡ ರೀಸರ್ಚ ಇವರು ಮುನ್ನುಡಿಯನ್ನು ಬರೆದುಕೊಟ್ಟು ನಮ್ಮನ್ನು ಉಪಕೃತರಾಗಿ ಮಾಡಿದ್ದಾರೆ. ಅವರಿಗೆ ಸಂಸ್ಕೃತಿ ಪ್ರಕಾಶನವು ಚಿರಋಣಿ. ಶ್ರಮವಹಿಸಿ ನಮ್ಮ ಪುಸ್ತಕವನ್ನು ಮುದ್ರಿಸಿ ಕೊಟ್ಟ ಹಿಂದಮಾತಾ ಮುದ್ರಣಾಲಯದ ಒಡೆಯರ ಉಪಕಾರ ಸ್ಮರಿಸುವುದು ನಮ್ಮ ಕರ್ತವ್ಯವು.

**—ಉಡುಪಿ ಭೀ. ಬೀಡಿ.**

ಶ್ರೀ :

# ಜಯ, ಗುರುದೇವ !

## ೧

ವಿಜಯಪುರದ ಅರಸು ವಿಜಯಚಂದ್ರನು ಒಮ್ಮೆ ಚಂದ್ರವಳ್ಳಿ-ಯೆಂಬ ಹಳ್ಳಿಗೆ ಹಳ್ಳಿಗನ ವೇಷದಲ್ಲಿ ಬಂದನು. ಅವನ ಜೊತೆಯಲ್ಲಿ ಮಾನ-ಸಿಂಹನೆಂಬ ಅವನ ಸೇನಾಪತಿ ಇದ್ದನು. ಅವನೂ ಹಳ್ಳಿಗನ ವೇಷದಲ್ಲಿ. ಊರ ಬಳಿಯ ಮಾವಿನ ತೋಪಿನಲ್ಲಿ ಅವರಿಬ್ಬರೂ ಕುಳಿತಿರುವಾಗ ದನಗಾಯಿಗಳು ದನಗಳನ್ನು ಅಲ್ಲಿ ತರುಬಿ ರೊಟ್ಟಿ ತಿನ್ನುತ್ತ ಕುಳಿತರು. ರೊಟ್ಟಿ ತಿನ್ನುವುದಾದ ಬಳಿಕ ಸೇನಾಪತಿ ಅವರೆಡೆಗೆ ಬಂದು ಸವಿಮಾತಿನಿಂದ, "ಏನಯ್ಯಾ, ಈ ಊರಲ್ಲಿ ಹೊಸ ಸುದ್ದಿ ಏನಾದರೂ ಇದೆಯೆ ?" ಎಂದನು. ದನಗಾಯಿಗಳಲ್ಲಿ ಒಬ್ಬನೆಂದನು, "ನಮ್ಮ ಊರು ದೊಡ್ಡದೆ ? ಇದೊಂದು ಚಿಕ್ಕ ಹಳ್ಳಿ, ಹೊಸಸುದ್ದಿ ಏನಿರಬೇಕು ?"

"ಹಳ್ಳಿಯಾದರೇನು ? ಹೊಸಸುದ್ದಿ ಇರಬಾರದೇಕೆ ?"

"ಹೇಳುವಂತಹದೇನೂ ಇಲ್ಲ. ನಿನ್ನೆ ಒಬ್ಬ ದೊಡ್ಡ ಮನುಷ್ಯರು ಇಲ್ಲಿಯ ಅಮ್ಮನವರ ಪೂಜೆಗೆ ಬಂದಿದ್ದರು."

"ಇಲ್ಲಿ ಯಾವ ಅಮ್ಮನವರು?"

"ಲಕ್ಷ್ಮೀದೇವಿ. ನಿಮಗೆ ಗೊತ್ತಿಲ್ಲವೆ? ಅಗೋ, ಅಲ್ಲಿ ಕಾಣಿಸುತ್ತದೆ ನೋಡಿರಿ ಗುಡಿಯ ಶಿಖರ. ಆ ದೊಡ್ಡ ಮನುಷ್ಯರು ಪ್ರದಕ್ಷಿಣೆಮಾಡುವಾಗ...."

"ಏನಾಯ್ತು?"

"ನಮ್ಮೂರ ಪದ್ಮಮ್ಮ ಮಗುವನ್ನು ಆಡಿಸುತ್ತ ಅಲ್ಲಿಯೆ ಬಂಡೆಡೆ ಕುಳಿತಿದ್ದರು."

"ಮುಂದೆ?"

"ಆ ದೊಡ್ಡ ಮನುಷ್ಯರ ದೃಷ್ಟಿ ಮಗುವಿನ ಕಡೆಗೆ ಹೋಯ್ತು. ಯಾರದು ಹೋಗಲಿಕ್ಕಿಲ್ಲ? ಎಷ್ಟು ಚೆಂದ ಮಗು!"

"ಮಕ್ಕಳನ್ನು ಕಂಡರೆ ಯಾರಿಗೆ ಅಕ್ಕರೆ ಆಗದು? ಅವರ ದೃಷ್ಟಿ ಮಗುವಿನ ಕಡೆಗೆ ಹೋಯ್ತು. ಆ ಬಳಿಕ?"

"ಅವರು ಮಗು ಇದ್ದಲ್ಲಿಗೆ ಹೋದರು. ಅದರ ಮುಖವನ್ನು ನೋಡಿದರು. ಕಾಲಿನಿಂದ ತಲೆಯ ವರೆಗೆ ನೋಡಿದರು. ನೋಡುತ್ತಿದ್ದ ಹಾಗೆ ಅವರ ಮುಖದ ಮೇಲೆ ನಗೆ, ಆನಂದದ ನಗೆ."

"ನೋಡಿದರಷ್ಟೆ? ಏನಾದರೂ ಮಾತನಾಡಿದರೊ?"

"ಮಗುವಿನ ತಾಯಿಗೆ ಎಂದರು, 'ನೀನು ಬಹು ಭಾಗ್ಯವಂತಿ, ತಾಯೀ! ನಿನ್ನ ಮಗನು ಇಪ್ಪತ್ತುನಾಲ್ಕನೆಯ ವರ್ಷ ಅರಸು ಮಗಳನ್ನು ಮದುವೆಯಾಗುವನಮ್ಮಾ!' ಅದನ್ನು ಕೇಳಿ, ಪದ್ಮಮ್ಮ ಮಗುವನ್ನು ಅವರ ಅಡಿಯ ಮೇಲೆ ಇರಿಸಿದಳು, ಮತ್ತು ತಾನೂ ಅವರ ಕಾಲಿಗೆ ಎರಗಿದಳು."

"ಅವರು ಹೀಗೆಂದರೊ? ಆ ಬಳಿಕ ಏನಾಯ್ತು?"

"ಅವರು ಮಗುವಿನ ಮೈಯ್ಯಮೇಲೆ ಕೈಯಾಡಿಸಿದರು, ಮತ್ತು ಪದ್ಮಮ್ಮನನ್ನು ಹರಸಿ ಮತ್ತೆ ಪ್ರದಕ್ಷಿಣೆಗೆ ಹೊರಟರು."

"ಅವರು ಇನ್ನೂ ಈ ಊರಲ್ಲಿ ಇದ್ದಾರೆಯೆ?"

" ಇಲ್ಲ ಅವರು ಪ್ರದಕ್ಷಿಣೆ-ನಮಸ್ಕಾರಗಳನ್ನು ಮುಗಿಸಿ, ಅಮ್ಮನವರಿಗೆ ಐದು ತೆಂಗುಗಳನ್ನು ಒಡೆಯಿಸಿ, ಮಂಗಳಾರ್ತಿ ಮಾಡಿಸಿ, ಪ್ರಸಾದ ತೆಗೆದುಕೊಂಡು ಆಗಲೇ ಹೋಗಿಬಿಟ್ಟರು. "

" ಅವರು ಎಲ್ಲಿ ಹೋದರು ? ನಿನಗೆ ಗೊತ್ತಿದೆಯೊ ? "

" ಇಲ್ಲ. ಅವರು ಮುಂದೆ ಯಾರ ಜೊತೆಗೂ ಮಾತನಾಡದೆ ಅಮ್ಮನವರಿಗೆ ನಮಸ್ಕಾರಮಾಡಿ ಹೊರಗೆ ಹೋದರು. ಅವರನ್ನು ಕಾಣಬೇಕೆಂದು ನಾನೂ ಹೊರಟೆನು. ಒಳಗೆ ಇದ್ದ ನನ್ನ ಮುದುಕಿ ತಾಯಿ ನನ್ನನ್ನು ಕೂಗಿದಳು ನಾನು ಅವಳ ಹತ್ತಿರ ಹೋದೆನು. ಹೊರಗೆ ಬಂದು ನೋಡಿದಾಗ ಆ ದೊಡ್ಡ ಮನುಷ್ಯರು ಅಲ್ಲಿ ಇರಲಿಲ್ಲ. "

ಸೇನಾಪತಿ ಮಾನಸಿಂಹನು ಸುದ್ದಿಯನ್ನು ಕೇಳಿ ಮರಳಿ ಅರಸನ ಬಳಿಗೆ ಬಂದನು. ಅವರಿಬ್ಬರು ಅಲ್ಲಿಂದ ಹೊರಟು ರಾಜಧಾನಿಗೆ ಬಂದರು.

---

## ೨

ಮಾರುದಿನ ಬೆಳಗಿನಲ್ಲಿ ಚಂದ್ರವಳ್ಳಿಯಲ್ಲಿ ಎಲ್ಲೆಲ್ಲಿಯೂ ಹಾಹಾಕಾರ! ಎಲ್ಲರ ಬಾಯಲ್ಲಿಯೂ, "ಎಂತಹ ಮಗು ! ಎಷ್ಟು ಚೆಂದ ಮಗು ! ಕಲ್ಲೆದೆಯ ಕಟುಕರಲ್ಲದೆ ಯಾರು ಈ ಕೆಲಸವನ್ನು ಮಾಡುವರು ? ಎಳ ಮಗುವನ್ನು ತಾಯಿಯಿಂದ ಹೀಗೆ ಅಗಲಿಸಬಹುದೆ ? ಯಾರು ಒಯ್ದಿರಬಹುದು ? ಏಕೆ ಒಯ್ದಿರಬಹುದು ? ಅಯ್ಯೋ, ತಾಯಿ ಪದ್ಮಮ್ಮನಂತು ನೆಲದ ಮೇಲೆ ಬಿದ್ದವಳು ಎದ್ದೇ ಇಲ್ಲ! ಶ್ರೀಪತಿರಾಯರು ಹೇಗೋ ಚೇತರಿಸಿಕೊಂಡಿರುವರು. ಗಂಡಹೆಂಡಿರು ಎಷ್ಟೊಂದು ಒಳ್ಳೆಯವರು! ಯಾರಿಗಾದರೂ ಅವರು ಅಹಿತವನ್ನು ಬಯಸುವರೆ ? ಎಲ್ಲರಿಗೂ ಅವರು ಬೇಕಾದವರು. ಸಜ್ಜನರಿಗೇಕೆ ಸಂಕಟವೊ ? ಮಗುವನ್ನು ಒಯ್ದವರು ಅದನ್ನು ಕೊಂದಿರಲಾರರಷ್ಟೇ ! ದೇವರೇ, ನಮ್ಮ ಪದ್ಮಮ್ಮನ ಮಗನು ಸುರಕ್ಷಿತವಾಗಿರಲಿ ! ಅಮ್ಮಾ, ಲಕ್ಷ್ಮೀದೇವಿ, ಕೂಸನ್ನು ನೀನೇ ಕಾಯಬೇಕಮ್ಮಾ ! " ಎಂಬ ಮಾತೇ ಮಾತು.

ಅಂದು ಇಳಿಹೊತ್ತಿನಲ್ಲಿ ಒಂದು ಕಾಡಿನೊಳಗೆ ತನ್ನ ಗುಡಿಸಲಿನ ಹೊರ ಬದಿಯಲ್ಲಿ ಒಬ್ಬ ಮನುಷ್ಯನು ಹರಕು ಬಟ್ಟೆಗೆ ತೇಪೆಯನ್ನು ಹಚ್ಚುತ್ತ ಕುಳಿತಿದ್ದನು ಅವನ ಮುಖದ ಮೇಲೆ ದುಃಖದ ಛಾಯೆ ಇದ್ದಿತು. ಆಗಾಗ ಕಣ್ಣುಗಳು ನೀರಿನಿಂದ ತುಂಬುತ್ತಿದ್ದುವು. ಮೇಲಿಂದ ಮೇಲೆ ಅವನು ಉಸಿರುಗರೆಯುತ್ತಿದ್ದನು. ಹೊಲಿವುದು ಮುಂದೆ ಸಾಗದಂತಾಯ್ತು. "ಶಿವನೇ, ಮಗನನ್ನು ನನಗೆ ಕೊಟ್ಟೆಯೇಕೆ? ಕೊಟ್ಟು ಮತ್ತೆ ಒಯ್ದೆಯೇಕೆ? ಎಂಟು ತಿಂಗಳ ಮಗು, ಅಂಗಳದಲ್ಲಿ ಹರಿದಾಡಿದರೆ ಅಂಗಳವು ಹರಿದಾಡುವ ಮಕ್ಕಳಿಂದ ತುಂಬಿದಂತೆ ಕಾಣಿಸುತ್ತಿತ್ತು! ಎಂತಹ ಮಗನನ್ನು ಒಯ್ದೆ, ಶಿವನೇ!" ಎನ್ನುತ್ತ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಅಷ್ಟರಲ್ಲಿ ದೂರದಲ್ಲಿ ಒಬ್ಬ ಮನುಷ್ಯನು ಬರುತ್ತಿರುವಂತೆ ಅವನಿಗೆ ತೋರಿತು. ಅವನು ಕಣ್ಣೊರಿಸಿಕೊಂಡು ಗೋಣೆತ್ತರಿಸಿ ನೋಡಿದನು. ಬರುತ್ತಿರುವವನು ಗುರುತಿನವನು; ಆದುದರಿಂದ ಅವನನ್ನು ಬರಮಾಡಲು ಎದ್ದು ನಿಂತನು. ಅಷ್ಟರಲ್ಲಿ ಆ ಮನುಷ್ಯನು ಬಂದು ಮುಸುಕಿನೊಳಗಿಂದ ಒಂದು ಕೂಸನ್ನು ಹೊರಗೆ ತೆಗೆದನು. ಕೂಸು ಮಲಗಿದ್ದಿತು.

"ಇದೇನು, ಬೀರನಾಯಕಾ, ಈ ಸಮಯದಲ್ಲಿ ಇಲ್ಲಿಗೆ ಬಂದೆ? ಕೂಸು ನಿನ್ನದೇನು? ಎಷ್ಟು ಮುದ್ದಾಗಿದೆ! ನಿನಗೆ ಮಗನು ಹುಟ್ಟಿದ ಸುದ್ದಿಯನ್ನೂ ನನಗೆ ತಿಳಿಸಕೂಡದೆ? ಈಗ ನೀನು ದೊಡ್ಡವರ ಮನೆಯ ಒಳಗಿನ ಚಾಕರನಪ್ಪಾ; ಇಲ್ಲದಿದ್ದರೆ ನನ್ನನ್ನು, ನಿನ್ನ ಗೆಳೆಯನನ್ನು, ನೀನು ಮರೆಯುತ್ತಿದ್ದೆಯಾ?"

"ಈಗ ಮರೆವ ಮಾತೇ ಇಲ್ಲ, ಕಾಲಿಂಗಾ. ಈ ಕೂಸು ನನ್ನದಲ್ಲ. ನಾನು ಇಲ್ಲಿಗೆ ಒಂದು ಕೆಲಸಕ್ಕಾಗಿ ಬಂದಿದ್ದೇನೆ. ಹೆಚ್ಚಿಗೆ ಮಾತನಾಡಲು ನನಗೆ ಹೊತ್ತು ಇಲ್ಲ. ಸೇನಾಪತಿಯ ಆಜ್ಞೆಯಿಂದ ಈ ಕೂಸನ್ನು ನಾನು ಎಲ್ಲಿಂದಲೋ ಹೇಗೋ ತಂದಿದ್ದೇನೆ. ಇದನ್ನು ನೀನು ಇಂದೇ ಕೊಲ್ಲಬೇಕು! ಯಾರಿಗೂ ಗೊತ್ತಾಗಕೂಡದು. ಇದು ನಿನಗೆ ಸೇನಾಪತಿಯ ಆಜ್ಞೆ. ಆಜ್ಞೆಯನ್ನು ಪಾಲಿಸದಿದ್ದರೆ - "

"ಏನು, ಬೀರನಾಯಕಾ? ಗೆಳೆಯನಾದ ನೀನು ನನಗೆ ಇಂತಹ ಕೆಲಸವನ್ನು ಮಾಡಲು ಹೇಳಬಹುದೆ? ಈ ಬಗೆಯ ಪಾಪಕರ್ಮಕ್ಕೆ ನಾನು

ಎಂದಾದರೂ ಮನಸ್ಸು ಮಾಡಿದ್ದೆನೆ? ಯಾರ ಗೊಡವೆಗೂ ಹೋಗದೆ ನನ್ನಷ್ಟಕ್ಕೆ ನಾನು ಇರುತ್ತ ಬಂದಿರುವೆನು. ಸೇನಾಪತಿಗೆ ನನ್ನ ಸ್ವಭಾವವು ಗೊತ್ತಿರಲಿಕ್ಕಿಲ್ಲ. ಆದರೆ ನಿನಗೆ ಗೊತ್ತಿಲ್ಲವೆ? ಈ ಬಗೆಯ ಆಜ್ಞೆಯನ್ನು ಪಾಲಿಸುವ ಮನುಷ್ಯನು ನಾನಲ್ಲವೆಂದು ಅವರಿಗೆ ಹೇಳುವುದು ನಿನ್ನ ಕರ್ತವ್ಯ ವಾಗಿರಲಿಲ್ಲವೆ? ನಾನು ಈ ಆಜ್ಞೆಯನ್ನು ಪಾಲಿಸೆನು."

"ಪಾಲಿಸದಿದ್ದರೆ ನಿನ್ನ ತಲೆ ಉಳಿಯದು!"

"ತಲೆ ಹೋಗುವುದೆಂದು ನಾನು ಭಯಪಡಬೇಕಾಗಿಲ್ಲ. ಹುಟ್ಟಿದ ಬಳಿಕ ಒಮ್ಮೆ ಸಾಯಲೇಬೇಕು. ತಲೆ ಹೊಡೆಸಿಕೊಂಡು ಸಾಯುವುದು ತನ್ನ ಹಣೆ ಬರೆಹದಲ್ಲಿದ್ದರೆ, ಹಾಗೇ ಆಗಲಿ. ಈ ಪಾಪವನ್ನು ನಾನು ಮಾಡೆನು! ಎಂಟು ದಿನಗಳ ಹಿಂದೆಯೆ ನನ್ನ ಎಂಟು ತಿಂಗಳ ಮಗನು ಹೋದನು. ಆ ದುಃಖ ದಲ್ಲಿದ್ದ ನಾನು ಎರಡನೆಯವರ ಮಗುವನ್ನು ಕೊಲ್ಲಲಾ?"

"ಕಾಲಿಂಗಾ, ಸೇನಾಪತಿಯ ಚಾಕರನು ನೀನು. ಅವರ ಆಜ್ಞೆಯನ್ನು ನೀನು ಪಾಲಿಸಲೇಬೇಕು. ಪಾಲಿಸದಿದ್ದರೆ ನಿನ್ನ ತಲೆ ಉಳಿಯದು. ನಾಳೆ ಮಧ್ಯಾಹ್ನದ ಹೊತ್ತಿಗೆ ಸೇನಾಪತಿ ಇಲ್ಲಿಗೆ ಬರುವರು. ಇದೊ, ಕೂಸು. ನಿನ್ನ ಕೆಲಸವನ್ನು ಬೇಗನೆ ಮುಗಿಸು. ನಾನು ಹೊರಟೆನು," ಎನ್ನುತ್ತ ಕೂಸನ್ನು ಕಾಲಿಂಗನ ಮುಂದೆ ಇರಿಸಿ ಬೀರನಾಯಕನು ಹೊರಟೇಹೋದನು.

ಕಾಲಿಂಗನಿಗೆ ಕಾಲೇ ಹೋದುವು. ಅವನಿಗೆ ನಿಲ್ಲಲಾಗಲಿಲ್ಲ. ಕುಳಿತು ಬಿಟ್ಟನು. ನಿಟ್ಟುಸಿರಿಡುತ್ತ ಅವನು ಎಂದನು, "ಏನು ನನಗೆ ಬಂದಿತು ಇದು! ನನ್ನ ಎಂಟು ತಿಂಗಳ ಮಗು ಸತ್ತು ಇಂದಿಗೆ ಎಂಟು ದಿನಗಳಾದುವು. ಎರಡು ದಿನ ಮೈ ಬಿಸಿಯಾಯ್ತು. ಮೂರನೆಯ ದಿನ ಶಿವನು ಒಯ್ದು ಬಿಟ್ಟನು! ಅಯ್ಯೊ, ಮಗನನ್ನು ಕಳೆದುಕೊಂಡ ನಾನು ಈ ಮಗುವನ್ನು ಕೊಲ್ಲಲಾ? ಕೊಲ್ಲದಿದ್ದರೆ ನನ್ನ ತಲೆ ಹೋಗುವುದಂತೆ! ಶಿವ, ಶಿವಾ! ಎಂತಹ ಪಾಪಿ ಜನ್ಮ ನನ್ನದು! ನಾನು ಈ ಮಗುವನ್ನು ಕೊಲ್ಲಬೇಕೆ? ಛೀ, ಆಗದು! ತಲೆ ಹೋದರೆ ಹೋಗಲಿ! ಶಿವನೆ, ಶಿವನೆ!"

ಕೂಸು ಎಚ್ಚತ್ತಿತು. ಕಾಲಿಂಗನು ಅದನ್ನು ತೊಡೆಯ ಮೇಲೆ ಇರಿಸಿ ಕೊಂಡನು, ಮೆಯ್ಯ ಮೇಲೆ ಕೈಯಾಡಿಸಿದನು. ಅವನ ಕಣ್ಣುಗಳು ನೀರು

ದುಂಬಿದುವು. "ಯಾರ ಮಗುವೋ ಇದು! ಕಳೆದುಕೊಂಡ ತಂದೆ-ತಾಯಿಗಳು ಎಷ್ಟು ದುಃಖಪಡುತ್ತಿರಬಹುದು ? ಮಗು, ನಾನು ನಿನ್ನನ್ನು ಕೊಲ್ಲುವುದಿಲ್ಲ. ತಲೆ ಹೋದರೆ ಹೋಗಲಿ, ಬುದ್ಧಿ ಉಳಿದರೆ ಬೇಕಾದುದನ್ನು ಕಂಡೇನು..........."

ದೂರದಲ್ಲಿ ಯಾರೋ ಹಾಡುತ್ತಿರುವಂತೆ ಕೇಳಿಸಿತು. ಬಹು ಮಧುರವಾದ ಧ್ವನಿ ಕಾಲಿಂಗನು ಕಿವಿಗೊಟ್ಟು ಕೇಳಿದನು.

ರಾಗ—ಧನ್ಯಾಸಿ

ಆಗುವೆನು ನಿನ್ನವನು ನಾನೆಂದು, ಹರಿಯೇ ?
ಹೋಗುತಿವೆ ಜೀವನದ ದಿನಗಳಿವು, ದೇವಾ ! ||ಪಲ್ಲವಿ||
ವಿವಿಧ ಯೋಚನೆಗಳೆಡೆವಿಡದೆ ಮನವನು ಮುತ್ತಿ
ಅವಿವೇಕಕೆನ್ನನೆಡೆ ಮಾಡುತಿಹುವು !
ಕವಿದಸತ್ಯವು ಕಣ್ಗೆ ನಿನ್ನನೇ ಮರೆಯಿಸುತೆ
ಬವಣೆಗೆನ್ನನು, ತಂದೆ, ಗುರಿಮಾಡುತಿಹುವು ! ||೧||
ಧನದ ಸಂಗ್ರಹಕೆಳಸಿ ಯಶದ ಮೋಹಕೆ ಸಿಲುಕಿ
ಮನವು ನಿನ್ನನೆ ಮರೆತುದೈ ಶ್ರೀನಿವಾಸಾ ! ||
ಕೊನೆಯೆಂದು, ಕೊನೆಯೆಂದು ನನ್ನ ಬವಣೆಗೆ, ದೇವ ?
ಕನಿಕರವು ಬಾರದೇ, ಕರುಣಾಳು, ನಿನಗೆ ? ||೨||
ಹಿಂದಾದುದಂತಿರಲಿ, ತಂದೆ ಇನ್ನಾದರೂ
ಮುಂದೆನ್ನನಗಲಿ ಬಳಲಿಸಬೇಡವಯ್ಯಾ ! ||
ಕಂದುತಿದೆ, ಕೊರಗುತಿದೆ ಜೀವಲತೆ, ಕಾಣೆಯಾ ?
ಎಂದಿನ್ನು ನೀನಿದಕೆ ನೀರೆರೆವುದಯ್ಯಾ ? ||೩||

ಮಧುರಧ್ವನಿಯಿಂದಲೂ ಹಾಡಿನ ಭಾವದಿಂದಲೂ ಕಾಲಿಂಗನ ಕದಡಿದ ಮನಸ್ಸು ಸ್ವಲ್ಪ ಶಾಂತವಾಯ್ತು. ಹಾಡುತ್ತಿರುವ ವ್ಯಕ್ತಿ ಕಾಲಿಂಗನ ಗುಡಿಸಲ ಕಡೆಗೇ ಬಂದಿತು. ಕಾಲಿಂಗನು ಕೂಸನ್ನು ಹೆಗಲ ಮೇಲೆ ಮಲಗಿಸಿಕೊಂಡು ಚಟ್ಟನೆ ಎದ್ದು ನಿಂತನು. ಬಂದವರು ಒಬ್ಬ ಯತಿ. ಅವರು ಎಂದರುಃ—

"ಏನಯ್ಯಾ, ಈ ಮಗು ನಿನ್ನದಲ್ಲವಷ್ಟೇ ?"

" ಅಲ್ಲ, ಸ್ವಾಮಿ; ಮತ್ತು ಯಾರದೆಂಬುದೂ ನನಗೆ ಗೊತ್ತಿಲ್ಲ. "

" ಈ ಮಗುವನ್ನು ನೀನು ಕೊಲ್ಲಬೇಕಲ್ಲವೆ ? "

" ತಂದುಕೊಟ್ಟವನು ಹಾಗೆ ಹೇಳಿ ಹೋದನು. ಸ್ವಾಮೀ, ಆ ಕೆಲಸವನ್ನು ನಾನು ಮಾಡಲಾರೆನು. "

" ಮಾಡದಿದ್ದರೆ ನಿನ್ನ ತಲೆ ಹೋಗುವುದು, ಅಲ್ಲವೆ ? "

" ಹಾಗೆ ಅವನು ಹೇಳಿದನು. "

" ನೀನಾದರೂ ಬದುಕಬೇಕು, ಈ ಮಗುವಾದರೂ ಬದುಕಬೇಕು, ಅಲ್ಲವೆ ?"

" ಅಹುದು, ಹಾಗೆ ಅರ್ಥವಾಗುತ್ತದೆ. "

" ಮಗು ಬದುಕಲೆಂದು ನೀನು ಸಾಯಲು ಸಿದ್ಧನಾದೆಯೆಂದು ಇಟ್ಟುಕೊಳ್ಳುವ. ಕೊಲ್ಲುವವರು ನಿನ್ನನ್ನು ಕೊಂದ ಬಳಿಕ ಮಗು ಸುರಕ್ಷಿತವಾಗಿ ಉಳಿವುದೆಂದು ನಿನ್ನ ಕಲ್ಪನೆಯೆ ? "

" ಮುಂದಿನದನ್ನು ಯಾರು ಹೇಳಬಲ್ಲರು, ಸ್ವಾಮೀ ? ಮಗುವನ್ನೂ ಅವರು ಕೊಲ್ಲಬಹುದು. "

" ಹಾಗಾದರೆ, ನೀನು ಸತ್ತರೆ ಫಲವೇನು ? ಮಗು ಉಳಿವುದೆಂಬುದು ನಿಶ್ಚಯವಿಲ್ಲ. ಹೇಗಾದರೂ ಮಗು ಬದುಕಬೇಕೆಂದಿರುವೆಯೊ, ನೀನು ಸತ್ತ ಬಳಿಕ ಏನಾದರೂ ಆಗಲೆಂದಿರುವೆಯೊ ? "

" ಸ್ವಾಮೀ, ಮಗು ಬದುಕಬೇಕು. "

" ಬದುಕಿಸಿಕೊಳ್ಳಲು ಉಪಾಯವೇನು ? "

" ನಾನು ಕಾಣೆನು, ಸ್ವಾಮೀ. "

" ನನ್ನನ್ನು ನಂಬುವೆಯಾ ? "

" ಸ್ವಾಮೀ, ತಾವು ದೊಡ್ಡ ಮನುಷ್ಯರಾಗಿ ತೋರುವಿರಿ. ದೊಡ್ಡವರನ್ನು ನಂಬದಿದ್ದರೆ ಗತಿಯೇನು ? "

" ಹಾಗಾದರೆ, ಕೇಳು. ನಿನ್ನ ಬಳಿಯಲ್ಲಿ ಮಗುವಿದ್ದರೆ, ನೀನೂ ಸಾಯುವೆ, ಮಗುವೂ ಸಾಯುವುದು. ಮಗುವನ್ನು ನನಗೆ ಒಪ್ಪಿಸು. ಅದನ್ನು ಕಾಯುವ ಹೊಣೆ ನನ್ನದು, ಒಪ್ಪಿಗೆಯೆ ? "

"ಒಪ್ಪುವೆನು, ಸ್ವಾಮೀ. ಹೇಗಾದರೂ ಈ ಮಗು, ನನ್ನ ಮಗು, ಬದುಕಿ ದೊಡ್ಡವನಾದರೆ ಸಾಕು."

"ಮಗು ಬದುಕಿ ದೊಡ್ಡವನಾಗುವನು, ಕಾಲಿಂಗಾ; ಆ ವಿಷಯದಲ್ಲಿ ನಿಶ್ಚಿಂತನಾಗು. ಆದರೆ ನಿನ್ನ ಗತಿ ?"

"ನನ್ನ ಗತಿ ಶಿವನು, ಸ್ವಾಮೀ !"

"ನೀನೂ ಬದುಕುವೆ, ದೊಡ್ಡವನಾಗುವೆ, ಕಾಲಿಂಗಾ. ಮಗುವನ್ನು ತಾ, ಹೋಗಿ ಬರುವೆನು."

ಕಾಲಿಂಗನು ಮಗುವನ್ನು ಹೆಗಲ ಮೇಲಿಂದ ತೋಳುಗಳಲ್ಲಿ ತೆಗೆದು ಕೊಂಡು, ಕಣ್ತುಂಬಿ ನೋಡಿ, ಮೈಯ್ಯ ಮೇಲೆ ಕೈಯಾಡಿಸಿ, ಯತಿಯ ಕೈಗಳಲ್ಲಿ ಇರಿಸಿದನು, ಮತ್ತು ತಾನು ಅವರ ಅಡಿಗಳ ಮೇಲೆ ಹಣೆಯಿಟ್ಟನು. ಯತಿಯ ಅಡಿಗಳು ಅವನ ಕಣ್ಣೀರಿನಿಂದ ತೊಯ್ದುವು. ಯತಿ ಅವನ ಬೆನ್ನ ಮೇಲೆ ಕೈಯಾಡಿಸಿ, "ಏಳು ಕಾಲಿಂಗಾ, ಹೋಗಿ ಬರುವೆನು. ದೇವರು ನಿನ್ನನ್ನು ಕಾಯಲಿ," ಎಂದು ನುಡಿದರು. ಕಾಲಿಂಗನು ಎದ್ದು ಕೈಮುಗಿ ದನು. ಯತಿ ಮಗುವನ್ನು ತೆಗೆದುಕೊಂಡು ಹೋದರು.

ಮರುದಿನ ಬೆಳಗಿನಲ್ಲಿ ಅಲ್ಲಿ ಕಾಲಿಂಗನೂ ಇರಲಿಲ್ಲ. ಅವನು ಗುಡಿಸಲೂ ಇರಲಿಲ್ಲ. ಗುಡಿಸಲು ಇದ್ದಲ್ಲಿ ನಿಗಿನಿಗಿ ಕೆಂಡವೂ ಬೂದಿಯೂ ಇದ್ದಿತು.

---

## ೩

ಇನ್ನೂ ಮಧ್ಯಾಹ್ನವಾಗಿರಲಿಲ್ಲ. ಸೇನಾಪತಿ ಕಾಲಿಂಗನನ್ನು ಕಾಣಲು ಕಾಡಿಗೆ ಬಂದನು. ಅವನೊಡನೆ ಬೀರನಾಯಕನೂ ಇನ್ನೊಬ್ಬ ಮನುಷ್ಯನೂ ಇದ್ದನು. ಕಾಲಿಂಗನ ಗುಡಿಸಲಿನ ಆ ಸ್ಥಿತಿಯನ್ನು ಕಂಡು ಸೇನಾಪತಿಗೆ ಆಶ್ಚರ್ಯವಾಯಿತು. "ಇದರ ಅರ್ಥವೇನು, ಬೀರನಾಯಕಾ?" ಸೇನಾಪತಿ ಎಂದನು.

"ನನ್ನ ಬುದ್ಧಿಗೆ ತೋಚದು."

" ನಮ್ಮ ಕೆಲಸವನ್ನು ಕಾಲಿಂಗನು ಮಾಡಿರಬಹುದಲ್ಲವೇ ? "

" ಮಾಡಿರದೆ ಇರನು. "

" ಅದು ಹೇಗೆ ? "

" ತಮ್ಮ ಅಪ್ಪಣೆಯನ್ನು ಮೀರಲು ಸಾಮರ್ಥ್ಯವು ಯಾರಿಗೆ ಇದೆ?"

" ಹಾಗಾದರೆ, ನಾವು ಇಲ್ಲಿಗೆ ಬರುವೆವೆಂದು ನೀನು ಅವನಿಗೆ ತಿಳಿಸಿರಲಿಲ್ಲವೋ ? "

" ತಿಳಿಸಿದ್ದೆನು."

" ನೀನು ತಿಳಿಸಿದ್ದರೆ, ನಮ್ಮನ್ನು ಕಾಣಲು ಅವನು ಇಲ್ಲಿ ಇಲ್ಲವೇಕೆ ? ನಾವು ಬರುವ ಹೊತ್ತಿಗೆ ಅವನು ಇಲ್ಲಿ ಇಲ್ಲವೆಂದ ಮೇಲೆ ನಮ್ಮ ಅಪ್ಪಣೆಯನ್ನು ಅವನು ಮೀರಿದಂತಾಗಲಿಲ್ಲವೇ ? "

" ನಿಮ್ಮ ಅಪ್ಪಣೆಯನ್ನು ನೆರವೇರಿಸಿ ಬಳಿಕ ಅವನು ಸುಟ್ಟುಕೊಂಡು ಸತ್ತಿರಲಾರನಷ್ಟೇ ? "

" ಏಕೆ ಹೀಗೆನ್ನುವೆ ? "

" ಬೆಂಕಿಯೂ ಬೂದಿಯೂ ಎಷ್ಟಿದೆ ನೋಡಿರಿ. ಗೇಣು ಗುಡಿಸಲು ಸುಟ್ಟರೆ ಬೆಂಕಿಯೂ ಬೂದಿಯೂ ಇಷ್ಟೊಂದು ಆಗುತ್ತಿತ್ತೇ ? ಗುಡಿಸಲನ್ನು ಮುರಿದು, ಮೇಲೆ ಕಟ್ಟಿಗೆಯೊಟ್ಟಿ, ಕೊಳ್ಳಿಯಿಟ್ಟು ತಾನು ಅದರಲ್ಲಿ ಬಿದ್ದು ಸತ್ತಿರಬಹುದೆಂದು ನನಗೆ ಎನಿಸುತ್ತದೆ ! "

" ಹಾಗೆ ಅವನು ಸಾಯಲು ಕಾರಣವೇನು ? "

" ಕಾರಣವೇನೋ ಇದೆ. ಎಂಟು ದಿನಗಳ ಹಿಂದೆ ಅವನ ಎಂಟು ತಿಂಗಳ ಗಂಡುಮಗು ಸತ್ತಿತು. ಅವನು ಆ ದುಃಖದಲ್ಲಿ ಇರುವಾಗ ತನ್ನ ಕೈಯಿಂದಲೇ ಅದೇ ವಯಸ್ಸಿನ ಮಗುವನ್ನು ಕೊಲ್ಲಬೇಕಾಗಿ ಅವನಿಗೆ ಬಂದಿತು. ಇದರಿಂದ ಅವನು ಹುಚ್ಚು ಹಿಡಿದಂತಾಗಿ ತಾನೂ ಸುಟ್ಟುಕೊಂಡು ಸತ್ತಿರಬಹುದು."

" ಇದೇನನ್ನು ನೀನು ಹೇಳುತ್ತಿರುವೆ, ಬೀರನಾಯಕಾ! ಅವನ ಮಗು ಸತ್ತುದು ನನಗೆ ಗೊತ್ತಾಗಿದ್ದರೆ ಈ ಕೆಲಸವನ್ನು ನಾನೆಲ್ಲಿ ಅವನಿಗೆ ಒಪ್ಪಿಸುತ್ತಿದ್ದೆನು? ಮಗನು ಸತ್ತ ದುಃಖದಲ್ಲಿದ್ದವನು ಇನ್ನೊಂದು ಮಗುವನ್ನು ಕೊಲ್ಲಲು ಕೈಯೆತ್ತಲಾರನು. ನಮ್ಮ ಅಪ್ಪಣೆಯನ್ನು ಮೀರಲಾರದೆ ಮಗುವನ್ನು ಕೊಂದ ಬಳಿಕ ಹುಚ್ಚನಾಗಿ ಅವನು ಸುಟ್ಟುಕೊಂಡು ಸತ್ತಿರಬಹುದು ಎಂಬ ನಿನ್ನ

ತರ್ಕವು ತಪ್ಪಾಗಿ ತೋರುವುದಿಲ್ಲ. ಆದರೂ---" ಹೀಗೆನ್ನುತ್ತಿರುವಾಗ ಗಾಳಿ ಬೀಸಿ ಮೇಲಿನಿಂದ ಏನೋ ಧೊಪ್ಪೆಂದು ಸೇನಾಪತಿಯ ಮುಂದೆ ಬಿದ್ದಿತು.

ಸೇನಾಪತಿ ನೋಡಿದನು. ಎರಡು ಬೆಂದ ಮರಿ ಹಕ್ಕಿಗಳು! ಗುಡಿಸಲು ಮರದ ಕೆಳಗೆ ಇತ್ತು. ಅದು ಸುಡುತ್ತಿರುವಾಗ ಉರಿಯ ಜಳದಿಂದ ಮೇಲಿದ್ದ ಗೂಡಿನಲ್ಲಿಯ ಮರಿಗಳು ಬೆಂದು ಸತ್ತಿದ್ದುವು. ಈಗ ಗಾಳಿ ಬೀಸಿದುದರಿಂದ ಅವು ಕೆಳಗೆ ಬಿದ್ದುವು.

ಸೇನಾಪತಿ ಅಲ್ಲಿ ನಿಲ್ಲಲಾರದೆ ಆ ಇಬ್ಬರೊಡನೆ ಅಲ್ಲಿಂದ ಹೊರಟು ಬಿಟ್ಟನು.

---

## ೪

ಹಿಂದೆ ಹೇಳಿದ ಮಾತಿಗೆ ನಾಲ್ಕು ವರ್ಷಗಳಾದುವು. ಅಂದು ವಿಜಯಪುರದಲ್ಲಿ ಅಲ್ಲಿ, ಇಲ್ಲಿ, ಎಲ್ಲೆಲ್ಲಿಯೂ ಉತ್ಸವವು. ಅಗಸೆಬಾಗಿಲು ಮೊದಲಾಗಿ ಎಲ್ಲ ಬಾಗಿಲುಗಳಿಗೂ ತೋರಣಗಳು; ಮನೆಮನೆಗೆ ಧ್ವಜಪತಾಕೆ ಗಳು; ಕೇರಿಕೇರಿಗಳಲ್ಲಿ ಕೋಲಾಟದ ಮೇಳಗಳು; ದೇವಸ್ಥಾನಗಳಲ್ಲಿ ವಿಶೇಷ ಪೂಜೆಗಳು; ನಗಾರಿನೌಬತ್ತುಗಳ, ಗಂಟೆಜಾಗಟೆಗಳ ಮಹಾನಾದವು; ಜನರು ಚೆಂದಚೆಂದದ ಉಡಿಗೆತೊಡಿಗೆಗಳನ್ನು ಧರಿಸಿ ಉತ್ಸಾಹದಿಂದ ತುಂಬಿ ತುಳುಕುತ್ತಿದ್ದರು. ತಮ್ಮ ಅರಸು ವಿಜಯಚಂದ್ರನಿಗೆ ಮಗಳು ಹುಟ್ಟಿದಳೆಂದು ಇಷ್ಟೊಂದು ಉತ್ಸಾಹವು!

ಸಾಯಂಕಾಲದ ವರೆಗೆ ಸೇನಾಪತಿ ಮಾನಸಿಂಹನು ಅರಮನೆಯಲ್ಲಿದ್ದು ತನ್ನ ಮನೆಗೆ ಮರಳಿ ಬಂದನು. ಅವನ ಆನಂದದಲ್ಲಿ ಒಂದು ಬಗೆಯ ಉದ್ವೇಗವಿತ್ತು. ಅವನು ಮೇಲ್ಮನೆಗೆ ಬಂದು ಅಧಿಕಾರದ ಬಟ್ಟೆಗಳನ್ನು ತೆಗೆದಿಟ್ಟು ಒಂದು ದಿಂಬಿಗೆ ಒರಗಿಕೊಂಡು ಕುಳಿತನು. ಮನಸ್ಸಿನಲ್ಲಿ ಏನೋ ಒಂದು ಅಶಾಂತಿ. ಕೆಲಹೊತ್ತು ಕುಳಿತು ತನ್ನಷ್ಟಕ್ಕೆ ಎಂದನು, "ಇನ್ನೂ ಬರಲಿಲ್ಲವಲ್ಲ ಜೋಯಿಸರು? ಕರೆತರಲು ಯಾರನ್ನಾದರೂ ಕಳಿಸಲಾ? ಅಥವಾ ನನಗೇ ಇಷ್ಟು ಆತುರತೆಯಾಗಿದೆ. ತಮ್ಮ ವೇಳೆಗೆ ಅವರು ಬಾರದೆ ಇರರು. ಇನ್ನೂ ದೀಪ ಹಚ್ಚುವ ಹೊತ್ತು ಆಗಿಲ್ಲವಷ್ಟೇ! ಅವರು ಬರುವ

ವರೆಗೆ ಬೇರೆ ವಿಚಾರಕ್ಕೆ ಮನಸ್ಸುಗೊಡುವ; ಆದರೆ ಬೇರೆ ವಿಚಾರಕ್ಕೆ ಮನಸ್ಸು ಸಿದ್ಧವಿದ್ದರಷ್ಟೇ?" ಹೀಗೆಂದು ಅವನು ಎದ್ದು ಕಿಡಕಿಯ ಬಳಿಗೆ ಬಂದು ಹೊರಗೆ ನೋಡಿದನು; ಮತ್ತೆ ಕುಳಿತ ಸ್ಥಳಕ್ಕೆ ತಿರುಗಿದನು. ಹೀಗೆ ಅವನು ನಾಲ್ಕಾರು ಸಲ ಮಾಡಿದನು. ಸ್ವಲ್ಪ ಮಬ್ಬಾಯ್ತು. ಆಳು ದೀಪಗಳನ್ನು ತಂದು ಅಲ್ಲಲ್ಲಿ ಇಟ್ಟನು. ಅಷ್ಟರಲ್ಲಿ ಇನ್ನೊಬ್ಬ ಆಳು ಬಂದು ಜೋಯಿಸರು ಬಂದಿರುವರೆಂದು ತಿಳಿಸಿದನು. "ಮೇಲೆ ಕಳುಹಿಸು," ಎಂದು ಮಾನಸಿಂಹನು ಹೇಳಿದನು. ಜೋಯಿಸರು ಬಂದರು.

"ಜೋಯಿಸರೇ, ರಾಜಪುತ್ರಿಯ ಕುಂಡಲಿ ಸಿದ್ಧವಾಗಿದೆಯಲ್ಲವೆ?" ಮಾನಸಿಂಹನು ಕೇಳಿದನು.

"ಸಿದ್ಧವಾಗಿದೆ, ಸೇನಾಪತೀ. ಬಹು ಉತ್ಕೃಷ್ಟ ಕುಂಡಲಿ."

"ಎಲ್ಲ ಗ್ರಹಗಳು ರಾಜಪುತ್ರಿಗೆ ಹಿತಕರವಾಗಿರುವುವಷ್ಟೆ ?"

"ಎಲ್ಲ ಗ್ರಹಗಳು ರಾಜಪುತ್ರಿಗೆ ಸೌಭಾಗ್ಯಸೂಚಕ ಸ್ಥಾನಗಳಲ್ಲಿ ಇವೆ."

"ಬಹು ಆನಂದದ ಮಾತು. ವಿವರನಾಗಿ ಕುಂಡಲಿಯನ್ನು ಸ್ಪಷ್ಟಗೊಳಿಸುವಿರಾ ?"

"ನಿಮಗೆ ಏನು ವಿವರಗಳು ಬೇಕು, ಸೇನಾಪತೀ ? ರಾಜಪುತ್ರಿ ಮದುವೆಯಾದ ತರುವಾಯ ವೈಭವಸಂಪನ್ನೆಯಾದ ಮಹಾರಾಣಿಯಾಗುವಳು. ಇದಕ್ಕೂ ಹೆಚ್ಚಿನ ವಿವರನೇನು ಬೇಕು ?"

"ಮದುವೆಯಾದ ತರುವಾಯ ಎಂದು ಹೇಳಿದಿರಲ್ಲ ? ರಾಜನಿದ್ದವನೇ ಅವಳನ್ನು ಮದುವೆಯಾಗುವುದಿಲ್ಲವೆಂದು ಅರ್ಥವೋ ?"

"ಅಹುದು, ಮದುವೆಯ ಸಮಯದಲ್ಲಿ ಅವಳ ಪತಿ ರಾಜನಿರುವುದಿಲ್ಲ."

"ಹಾಗಾದರೆ, ರಾಜಪುತ್ರನಿರುವನಷ್ಟೇ ? ಯಾವ ನಾಡಿನ ರಾಜಪುತ್ರನು ?"

"ರಾಜಪುತ್ರನಿರುವ ಯೋಗವೂ ಇಲ್ಲ."

"ಹಾಗಾದರೆ ನಮ್ಮ ರಾಜಪುತ್ರಿ ಮಹಾರಾಣಿಯಾಗುವುದು ಹೇಗೆ ?"

"ಹೇಗೆಂಬುದನ್ನು ರಾಜಕಾರಣಿಗಳು ಬಲ್ಲರು, ಅಥವಾ ತಪಃಪ್ರಭಾವದಿಂದ ತ್ರಿಕಾಲಜ್ಞಾನಿಗಳಾದ ತಪೋಧನರು ಬಲ್ಲರು; ಇದು ಜೋಯಿಸಂಗೆ

ಗೊತ್ತಾಗದ ಮಾತು, ಸೇನಾಪತೀ. ದೇವನ ಯೋಜನೆಗಳು ಹೇಗೋ ರೂಪುಗೊಳ್ಳುವುವು. ಈಗ ನಾನು ಮಹಾರಾಜರನ್ನು ಕಾಣಬೇಕು. ಹೊರಡುವೆನು." ಜೋಯಿಸರು ಹೋದರು.

ಸೇನಾಪತಿಯ ಉದ್ವೇಗವು ಹೆಚ್ಚಿತು. "ಇದೇನು ಅನಾಹುತವು! ನಮ್ಮ ರಾಜಪುತ್ರಿಯನ್ನು ಮದುವೆಯಾಗುವವನು ರಾಜನೂ ಅಲ್ಲ, ರಾಜಪುತ್ರನೂ ಅಲ್ಲ! ಹಾಗಾದರೆ ಆ ಹಳ್ಳಿಯ ದರಿದ್ರರ ಮಗನೊ? ಅಂದಿನಿಂದ ಇಂದಿನ ವರೆಗೆ ನಮ್ಮ ರಾಜವಂಶದವರ ಶರೀರಸಂಬಂಧಗಳು ಬೇರೆ ರಾಜವಂಶದವರೊಡನೆ. ಇನ್ನು ಸಾಮಾನ್ಯರೊಡನೆ ಸಂಬಂಧವೋ? ರಾಜನಿಷ್ಠನಾದ ಮಾನಸಿಂಹನಿಗೆ ಇದು ಅಸಹ್ಯವಾದ ಮಾತು! ಮದುವೆಯಾದ ತರುವಾಯ ರಾಜಪುತ್ರಿ ವೈಭವಸಂಪನ್ನೆಯಾದ ಮಹಾರಾಣಿಯಾಗುವಳಂತೆ! ಎಂದರೆ, ಆ ದೊಡ್ಡ ಮನುಷ್ಯರು ಹೇಳಿದ ಆ ಹಳ್ಳಿಯ ದರಿದ್ರರ ಮಗನು ಮಹಾರಾಜನಾಗುವನೋ? ಛೀ, ನಮ್ಮ ರಾಜಕುಲಕ್ಕೆ ಇದು ಕಲಂಕವು! ಆ ದೊಡ್ಡ ಮನುಷ್ಯರ ಭವಿಷ್ಯವಾಣಿಗೆ ನಮ್ಮ ಜೋಯಿಸರ ಕುಂಡಲಿಯ ಪುಷ್ಟಿ! ಬೀರನಾಯಕನ ತರ್ಕದಿಂದ ನನಗೆ ಸ್ವಲ್ಪ ಸಮಾಧಾನವಾಗಿತ್ತು; ಆದರೆ ಆ ತರ್ಕವು ಈಗ ಬುಡಮೇಲಾದಂತಾಯ್ತು. ಆ ದರಿದ್ರರ ಮಗನು ಬದುಕಿರುವನಲ್ಲವೇ? ನೋಡುವೆನು, ಇನ್ನು ಅವನು ಬದುಕುವನೋ ನನ್ನ ರಾಜನಿಷ್ಠೆ ಬದುಕುವುದೋ? ಮುಂದೇನು ಎಂಬುದನ್ನು ಯೋಚಿಸಲು ಈಗ ನನಗೆ ವೇಳೆ ಇಲ್ಲ. ಊರಲ್ಲಿ ಉತ್ಸಾಹದ ಅತಿರೇಕವಾಗಿರುವುದು. ಶಾಂತತೆಗೆ ಭಂಗ ಬಾರದಂತೆ ವ್ಯವಸ್ಥೆ ಮಾಡಲು ನಾನು ಹೊರಡಬೇಕು," ಎನ್ನುತ್ತ ಲಗುಬಗೆಯಿಂದ ಸೇನಾಪತಿ ಹೊರಟನು.

---

## ೫

ಕಾರ್ತಿಕಮಾಸದ ಶುಕ್ಲಪಕ್ಷದ ರಾತ್ರಿ. ಆ ಹೊತ್ತೇ ಸಾಯಂಕಾಲ ರಾಜಪುತ್ರಿಗೆ ಹೆಸರಿಡುವ ಸಮಾರಂಭವು ಜರುಗಿದ್ದಿತು. ಅಂದು ಹೀಗೆ ಹಬ್ಬದ ದಿನವಿದ್ದರೂ ರಾತ್ರಿಯಲ್ಲಿ ವಿಜಯಪುರದ ಬೀದಿಗಳಲ್ಲಿ ಕತ್ತಲೆ. ಜನರು ದೊಡ್ಡ

ಪ್ರಮಾಣದಲ್ಲಿ ಕಾರ್ತಿಕ ದೀಪಗಳ ಸಿದ್ಧತೆಯನ್ನೇನೊ ಮಾಡಿದ್ದರು. ಆದರೆ ಮನುಷ್ಯನ ಯೋಜನೆಗಳು ಒಮ್ಮೊಮ್ಮೆ ಕೈಗೂಡುವುದಿಲ್ಲ. ಯೋಜನೆಗಳು ಕೌಶಲ್ಯಪೂರ್ಣವಾಗಿರಬಹುದು, ಬುದ್ಧಿವಂತರು ಕೂಡಿ ಅವನ್ನು ಯೋಚಿಸಿರಬಹುದು; ಆದರೆ ಆಕಸ್ಮಾತ್ತಾಗಿ ಏನಾದರೂ ಸಂಭವಿಸಿ ಯೋಜನೆಗಳು ನೀರುಗೂಡುವುವು. ಅರಮನೆಯಲ್ಲಿ ಹೆಸರಿಡುವ ಸಮಾರಂಭವು ನಡೆದಿರು-ವಾಗಲೇ ಆಕಾಶದಲ್ಲಿ ಮೋಡಗಳು ಕವಿಯತೊಡಗಿದುವು. ಹೆಸರಿಡುವುದು ಆದ ಬಳಿಕ ಜನರು ಅರಮನೆಯಿಂದ ಮರಳುತ್ತಿರುವಾಗ ಹನಿಗಳು ಉದಿರಲು ಆರಂಭಿಸಿದುವು. ಜನರು ಬೇಗ ಬೇಗನೆ ಮನೆಯತ್ತ ನಡೆದಿರುವಾಗ ಗಾಳಿ ಬೀಸಿ ಮಳೆ ಸುರಿಯತೊಡಗಿತು. ಬೀದಿಯ ದೀಪಗಳೆಲ್ಲ ಆರಿದುವು. ಕಾರ್ಮೋಡಗಳಲ್ಲಿ ಚಂದ್ರನು ಎಲ್ಲಿ ಸಿಕ್ಕಿರುವನೆಂಬುದು ಗೊತ್ತಾಗುವಂತೆ ಇರಲಿಲ್ಲ. ನಕ್ಷತ್ರಗಳ ಹೆಸರೇಕೆ? ಹೀಗಾಗಿ ಬೀದಿಗಳಲ್ಲಿ ದಟ್ಟಾದ ಕತ್ತಲೆ.

ನಟ್ಟಿರುಳು. ಇನ್ನೂ ಮಳೆ ಸುರಿಯುತ್ತಲೇ ಇತ್ತು. ಒಂದು ಮನೆಯೊಳಗಿಂದ ಇಬ್ಬರು ಹೊರಗೆ ಬಂದು ಬಾಗಿಲಿಗೆ ಬೀಗವನ್ನಿರಿಸಿ ಸುರಿವ ಮಳೆಯಲ್ಲಿಯೆ ಬೀದಿಗುಂಟ ನಡೆದರು. ಊರ ಹೊರಗೆ ಬರುವವರೆಗೆ ಯಾವ ಮಾತನ್ನೂ ಅವರು ಆಡಲಿಲ್ಲ. ಬಳಿಕ ಮಾತುಗಳು ಕೇಳಿಸಲಾರಂಭಿಸಿದುವು.

"ಕಾಲಿಂದೀ, ಮನೆಯನ್ನೇನೋ ಬಿಟ್ಟು ಬಂದೆವು. ಇನ್ನು ಮುಂದಿನ ನಮ್ಮ ಬದುಕು ಹೇಗೆ ದೇವನೇ ಬಲ್ಲನು. ನೀನು ನನಗೆ ಹಂಚಿಕೆಯನ್ನು ಹೇಳಿದೆ, ಮತ್ತು ಧೈರ್ಯವನ್ನು ಕೊಟ್ಟೆ. ಮುಂದಿನ ಪಾಪದಿಂದ ನೀನು ನನ್ನನ್ನು ಕಾಯ್ದೆ. ಇನ್ನು ನಾನು ಯಾವ ದುರಾಶೆಗೂ ಬಲಿಬೀಳುವುದಿಲ್ಲ. ಆದರೆ ಮಾಡಿದ ಪಾಪವು ಎದೆಯಲ್ಲಿ ಕೊರೆಯುತ್ತದೆ! ಆ ದುಡ್ಡಿನಿಂದ, ಆ ಅಧಿಕಾರದಿಂದ ನನಗೆ ಬಂದಿತೇನು? ಬಡತನದಲ್ಲಿ, ಕಾಲಿಂದೀ, ನಾನು ಎಷ್ಟೊಂದು ಸುಖದಿಂದ ಇದ್ದೆನು! ದುಡ್ಡಿನ ಮೋಹವು ನನಗೆ ಏಕೆ ಬಂದಿತೊ? ಆ ದುಡ್ಡಿಗಾಗಿ ಎಂತಹ ಪಾಪವನ್ನು ಮಾಡಿದೆನಲ್ಲ! ನಮ್ಮ ಎರಡು ಮಕ್ಕಳು ಹುಟ್ಟುತ್ತಲೇ ಸತ್ತುದು ಆ ಪಾಪದಿಂದಲೇ ಅಲ್ಲವೇ? ಕಾಲಿಂದೀ, ನೀನು ಪುಣ್ಯವಂತಿ. ನಿನ್ನ ಪುಣ್ಯದ ಬಲದಿಂದಾದರೂ ಅವು ಬದುಕಬಾರದಾಗಿತ್ತೇ? ಆದರೆ ನನ್ನ ಪಾಪವು ಎಂತಹದು! ಅಯ್ಯೋ, ನನಗೋಸುಗ

ನಿನಗೂ ಕಷ್ಟವು! ಆ ಕೆಲಸಕ್ಕೆ ಕೈಯಿಕ್ಕುವ ಮೊದಲು ನಿನಗೆ ನಾನು ತಿಳಿಸ ಲಿಲ್ಲವೇಕೆ? ನೀನು ನನ್ನನ್ನು ತಡೆಯುತ್ತಿದ್ದೆ, ಈ ಕೇಡನ್ನು ತಪ್ಪಿಸುತ್ತಿದ್ದೆ. ಆದರೆ ನನ್ನ ಬುದ್ಧಿ ಹೋಯ್ತು. ನಾನು ಹಾಳಾದೆನು!" ಬೀರನಾಯಕನ ಕಂಠವು ತುಂಬಿತು. ಮುಂದೆ ಬಾಯಿಂದ ಮಾತು ಹೊರಡವು.

ಕಾಲಿಂದಿ ಮಾತನಾಡಲಿಲ್ಲ. ಅವಳು ಬೀರನಾಯಕನ ಹತ್ತಿರ ಬಂದು ಅವನ ಕೈಯನ್ನು ತನ್ನ ಒಂದು ಕೈಯಲ್ಲಿ ತೆಗೆದುಕೊಂಡಳು, ಮತ್ತೊಂದು ಕೈಯಿಂದ ಅವನ ಕಣ್ಣೀರನ್ನು ಒರಸಿದಳು. ಮುಂದೆ ಇಬ್ಬರೂ ಮೌನದಿಂದ ನಡೆದರು

ಸ್ವಲ್ಪ ಹೊತ್ತು ಹೀಗೆ ನಡೆದ ಬಳಿಕ, "ಆ ಕಾಲಿಂಗನು ಯಾರು?" ಎಂದು ಕಾಲಿಂದಿ ಕೇಳಿದಳು. ಬೀರನಾಯಕನೆಂದನು:—

"ಕಾಲಿಂಗನೂ ನಾನೂ ಹುಡುಗರಾಗಿದ್ದಾಗಿನಿಂದ ಗೆಳೆಯರಾಗಿದ್ದೆವು, ಜೀವದ ಗೆಳೆಯರಾಗಿದ್ದೆವು. ಇಬ್ಬರೂ ಸೇನಾಪತಿಯ ಚಾಕರರಾದೆವು. ಅವನು ಸೇನಾಪತಿಯ ವನಪಾಲಕನಾಗಿ ಬಡತನದಲ್ಲಿಯೇ ಉಳಿದನು. ದೈವ ವು ನನ್ನನ್ನು ಸೇನಾಪತಿಯ ಮನೆಗೆಲಸದ ಚಾಕರನಾಗಿ ಮಾಡಿತು. ಕೆಲಸ ದಲ್ಲಿ ನನ್ನ ಜಾಣತನವನ್ನು ಕಂಡು ಸೇನಾಪತಿ ನನ್ನನ್ನು ಮಹತ್ತ್ವದ ಕೆಲಸ ಗಳಲ್ಲಿ ತೊಡಗಿಸಲಾರಂಭಿಸಿದರು. ನನಗೆ ದುಡ್ಡು ಬಂದಿತು. ಅಧಿಕಾರವೂ ಬಂದಿತು. ನಿನ್ನ ತಂದೆಯ ಲಕ್ಷ್ಯವು ನನ್ನ ಕಡೆಗೆ ಹೊರಳಿತು. ಅವರು ನಿನ್ನನ್ನು ನನ್ನ ದೈವದ ಪಾಲುಗಾರ್ತಿಯಾಗಿ ಮಾಡಿದರು. ನಾನು ಧನದ ಮತ್ತು ಅಧಿ ಕಾರದ ಮದದಲ್ಲಿ ಮಿತ್ರನಾದ ಕಾಲಿಂಗನನ್ನು ಮರೆಯತೊಡಗಿದೆನು.ಆಗಾಗ ನಾನು ಅವನನ್ನು ಕಾಣಬೇಕಾಗುತ್ತಿತ್ತು; ಆದರೆ ಅವನೊಡನೆ ಕೆಲಸವೆಷ್ಟೊ ಅಷ್ಟೇ ಮಾತು. ಮೊದಲಿನ ಸಲಿಗೆಯನ್ನು ನಾನು ಇಟ್ಟುಕೊಳ್ಳಲಿಲ್ಲ. ಅವನು ಮಾತ್ರ ಗೆಳೆತನವನ್ನು ಮರೆಯಲಿಲ್ಲ. ಕಂಡಾಗೆಲ್ಲ ತನ್ನ ಪ್ರೇಮವನ್ನು ಬಗೆ ಬಗೆಯಾಗಿ ವ್ಯಕ್ತಗೊಳಿಸುತ್ತಿದ್ದನು; ಆದರೆ ಅದೆಲ್ಲವು ನನ್ನ ಐಶ್ವರ್ಯದ ಪೂಜೆಯೆಂದು ಪಾಪಿಯಾದ ನಾನು ಭಾವಿಸಿದೆನು! ನಾನು ಹೀಗೆ ಭಾವಿಸು ತ್ತಿರುವುದನ್ನು ಅವನು ಅರಿಯದೆ ಇರಲಿಲ್ಲವೆಂದು ಈಗ ನನಗೆ ಎನಿಸುತ್ತದೆ. ಆದರೂ ನನ್ನ ವಿಷಯದಲ್ಲಿ ಅವನ ಪ್ರೇಮವು ಸ್ವಲ್ಪವೂ ಅಳಿಯಲಿಲ್ಲ. ಆದರೆ,

ಕಾಲಿಂದೀ, ನಮ್ಮ ಮದುವೆಗೆ ಅವನನ್ನು ಆಮಂತ್ರಿಸುವ ಮನಸ್ಸೂ ಕೃತಘ್ನ ನಾದ ನನಗೆ ಆಗಲಿಲ್ಲ. ಮುಂದೆ ನನ್ನ ಐಶ್ವರ್ಯವು ಹೆಚ್ಚುತ್ತ ಹೋದ ಹಾಗೆ ನಾನು ಅವನ ವಿಷಯದಲ್ಲಿ ಇನ್ನೂ ಉದಾಸೀನನಾದೆನು. ಅವನ ಯೋಗ ಕ್ಷೇಮವನ್ನು ತಿಳಿದುಕೊಳ್ಳುವುದನ್ನೂ ಬಿಟ್ಟೆನು!" ಬೀರನಾಯಕನು ನಿಟ್ಟುಸಿರಿಟ್ಟು ಮತ್ತೆ ಎಂದನು, " ಅವನು ತನ್ನ ಮಗು ಒಂದು ವಾರದ ಹಿಂದೆ ಸತ್ತುದನ್ನು ಅಂದು ತಿಳಿಸಿದರೂ ನಾನು ಕಠೋರನಾಗಿ—ಅಯ್ಯೋ-ಅಯ್ಯೋ...." ಎಂದು ಬೀರನಾಯಕನು ಮತ್ತೆ ಅಳತೊಡಗಿದನು,ಮತ್ತು ಅಳುತ್ತಿದ್ದಂತೆಯೇ ಕೆಳಗೆ ಕುಳಿತುಬಿಟ್ಟನು.

ಕಾಲಿಂದಿ ಬೀರನಾಯಕನ ಹೆಗಲ ಮೇಲೆ ಕೈಯಿರಿಸಿ ಮೆಲ್ಲನಿಯಿಂದ ಎಂದಳು, "ಆ ತಪ್ಪನ್ನು ನೆನೆದು ಮತ್ತೆ ಮತ್ತೆ ಎಷ್ಟೊಂದು ವ್ಯಥೆಪಡಬೇಕು? ದೇವನು ನಿಮ್ಮ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಲಿಕ್ಕಿಲ್ಲವೆ ? "

" ನನ್ನ ತಪ್ಪು ಸಣ್ಣದಲ್ಲ, ಕಾಲಿಂದೀ ! "

" ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳುವ ದೇವನೂ ಸಣ್ಣವನಲ್ಲ ! "

" ಎಂತಹ ದೊಡ್ಡ ಮಾತನ್ನು ಹೇಳಿದೆ, ಕಾಲಿಂದೀ ! ನೀನು ಪುಣ್ಯವಂತಿ. ನಿನ್ನ ಹೃದಯವು ಉದಾರವಾದುದು. ದೇವನ ಔದಾರ್ಯವನ್ನು ಅರಿವ ಶಕ್ತಿ ಉದಾರರಿಗಲ್ಲದೆ ನನ್ನಂತಹ ಕ್ಷುದ್ರನಿಗೆ ಇರಬಲ್ಲುದೆ ? "

" ಮಾಡಿದ ಅನುಚಿತಕ್ಕಾಗಿ ಇಷ್ಟೊಂದು ನೊಂದುಕೊಳ್ಳುವವನು ಕ್ಷುದ್ರನಲ್ಲ ! "

" ಕಾಲಿಂದೀ, ನೀನು ನನ್ನ ಗುರು ! ಇನ್ನು ದುಃಖಿಸುವುದಿಲ್ಲ. ಹೃದಯಕ್ಕೆ ಬಿದ್ದ ಬರೆಯನ್ನು ಮಾಯಿಸುವ ಕೆಲಸವು ದೇವನಿಗೆ ಒಪ್ಪಿದೆ. ಇನ್ನು ಮುಂದೆ ನನ್ನ ಮಿತ್ರನನ್ನು ಹುಡುಕುವುದೊಂದೇ ನನ್ನ ಕೆಲಸವು. ಅವನನ್ನು ಕಂಡು ಎಲ್ಲ ತಪ್ಪನ್ನು ಒಪ್ಪಿಕೊಳ್ಳುವೆನು. ಅವನು ನನ್ನನ್ನು ಕ್ಷಮಿಸಬಹುದಲ್ಲವೇ, ಕಾಲಿಂದೀ ? "

" ಕ್ಷಮಿಸುವುದು ದೊಡ್ಡವರಿಗೆ ಹುಟ್ಟುಗುಣವು. ಕಾಲಿಂಗನು ದೊಡ್ಡವನಲ್ಲವೇ ? "

" ಕಾಲಿಂಗನು ದೊಡ್ಡವನು. ಆತನು ನನ್ನನ್ನು ಕ್ಷಮಿಸುವನು ! "

ಚಂದ್ರನನ್ನು ಮುಚ್ಚಿದ ಮೋಡವು ಓರಿಯಾಯ್ತು. ಅವರಿಬ್ಬರ ಮುಖದ ಮೇಲೆ ಬೆಳಕು ಬಿದ್ದಿತು. ಬೀರನಾಯಕನು ಪ್ರಸನ್ನನಾಗಿ ತೋರಿದನು. ಕಾಲಿಂದಿ ಮತ್ತಷ್ಟು ಪ್ರಸನ್ನೆಯಾದಳು.

"ಬೆಳಗಾಗಲಿಕ್ಕೆ ಇನ್ನೂ ಎರಡು ಗಂಟೆ ಇರುವಂತೆ ತೋರುತ್ತದೆ. ಅದರೊಳಗಾಗಿ ನಾವು ಕಾಡನ್ನು ಸೇರಬೇಕು. ಇನ್ನು ಏಳುವ," ಬೀರನಾಯಕನೆಂದನು.

ಮತ್ತೆ ಅವರು ನಡೆಯತೊಡಗಿದರು.

---

೬

ಬೆಳಗಾಗಿ ಮೂರು ಹೊತ್ತು ಏರಿತ್ತು. ಮಾನಸಿಂಹನು ತನ್ನ ಕೋಣೆಯಲ್ಲಿ ವಿಚಾರಮಗ್ನನಾಗಿ ಕುಳಿತಿದ್ದನು, "ನಾನು ಯಾವ ಕೆಲಸವನ್ನು ಹೇಳಿದರೂ ಬೀರನಾಯಕನು ಅದನ್ನು ಮಾಡಲು ಕೂಡಲೆ ಮುಂದುವರಿಯುತ್ತಿದ್ದನು, ಮತ್ತು ಜಾಣತನದಿಂದ ಅದನ್ನು ಮಾಡಿಯೆ ಬಿಡುತ್ತಿದ್ದನು. ಕೆಲಸದಲ್ಲಿ ಸಾಹಸಕ್ಕೆ ಆಸ್ಪದವಿದ್ದರಂತು ಅವನ ಉತ್ಸಾಹವು ಉಕ್ಕುತ್ತಿತ್ತು. ಆದರೆ ಈ ಕೆಲಸಕ್ಕೆ ಏಕೆ ಅವನು ಹೀಗೆ ಹಿಂಜರಿಯುತ್ತಿರುವನು? 'ಈ ಕೆಲಸವನ್ನು ನೀನು ಮಾಡಲೇ ಬೇಕು, ಬೀರನಾಯಕಾ. ನಿನ್ನ ಮೌನವು ನನಗೆ ಅಸಮಾಧಾನವನ್ನು ಹುಟ್ಟಿಸುತ್ತದೆ. ವೆಚ್ಚಕ್ಕೆ ಬೇಕಾದಷ್ಟು ಹಣವನ್ನು ಕೊಡುವೆನು. ನೀನು ನಾಳೆಯೆ ಹೊರಡಬೇಕು. ಕಾಲಿಂಗನನ್ನು ಹುಡುಕಿ ತರಲೇ ಬೇಕು. ನಾನು ನಿಜವಾಗಿಯೂ ಹೇಳುತ್ತೇನೆ, ಅವನು ಸುಟ್ಟು ಕೊಂಡು ಸತ್ತಿಲ್ಲ. ಆ ದರಿದ್ರ ಹುಡುಗನನ್ನು ಕೊಲ್ಲಲಾರದೆ ಅವನನ್ನು ಸಾಕುತ್ತಾ ಎಲ್ಲಿಯಾದರೂ ವೇಷವನ್ನು ಮಾರ್ಪಡಿಸಿಕೊಂಡು ಇರಲಿಕ್ಕೆಸಾಕು. ನೀನು ಪ್ರಯತ್ನಿಸಿದರೆ, ಅವನು ನಿನ್ನ ಕೈಗೆ ಸಿಕ್ಕದಿರಲಾರನು. ನೀನು ಅವನನ್ನು ತಂದು ಒಪ್ಪಿಸಿದರೆ ನಿನ್ನ ಮನೆಯನ್ನು ಬಂಗಾರದಿಂದ ತುಂಬುವೆನು, ಹೆಚ್ಚಿನ ಅಧಿಕಾರವೂ ನಿನಗೆ ದೊರೆವುದು,' ಎಂದು ನಿನ್ನೆ ಅವನಿಗೆ ಹೇಳಿದೆನು.

ಅವನು, 'ಈ ಕೆಲಸವು ನನ್ನಿಂದ ಆಗಬಹುದೆಂದು ನೀವು ಎಣಿಸುವಿರಾ?' ಎಂದು ಕೇಳಿದನು. 'ಆಗಲೇಬೇಕು, ಬೀರನಾಯಕಾ! ವ್ಯರ್ಥ ಯೋಚನೆಯಲ್ಲಿ ಕಾಲಕಳೆಯಬೇಡ. ಈಗ ಹೋಗು, ನಾಳೆ ಬೆಳಗಿನಲ್ಲಿ ಬಂದು, ಒಪ್ಪಿಕೊಂಡು, ಹಣವನ್ನು ತೆಗೆದುಕೊಂಡು ಕೂಡಲೇ ಕೆಲಸಕ್ಕೆ ಹೊರಡು,' ಎಂದು ಹೇಳಿ ಅವನನ್ನು ಕಳಿಸಿದೆನು. ಇನ್ನೂ ಅವನು ಬರಲಿಲ್ಲ. ಅವನನ್ನು ಕರೆತರಲು ಯಾರನ್ನಾದರೂ ಕಳಿಸಲಾ?" ಎಂದು ಸೇವಕನನ್ನು ಕರೆವಷ್ಟರಲ್ಲಿ ಒಬ್ಬ ರಾಜದೂತನು ಬಂದು, "ಮಹಾರಾಜರು ತಮಗೆ ಈಗಲೇ ಬರಹೇಳಿರುವರು," ಎಂದು ಹೇಳಿದನು. ರಾಜಸಂದೇಶವನ್ನು ಕೇಳಿದೊಡನೆ ಮಾನಸಿಂಹನು ಸಿದ್ಧನಾಗಿ ಅರಮನೆಗೆ ಹೊರಟನು. ಆ ಸಮಯದಲ್ಲಿ ಬೀರನಾಯಕನು ಕಾಲಿಂದಿಯೊಡನೆ ಕಾಡಿನ ಮಧ್ಯದಲ್ಲಿ ದಾರಿ ನಡೆಯುತ್ತಿದ್ದನು.

ಮಾನಸಿಂಹನು ಅರಮನೆಗೆ ಬಂದ ಬಳಿಕ ರಾಜನೆಂದನು. "ನಿನ್ನಿನ ಮಳೆಯಿಂದ ಎಂತಹ ಕೇಡು ಆಗಿದೆಯಲ್ಲ! ನೋಡಿದಿರಾ, ಸೇನಾಪತೀ?"

"ಬಲು ದೊಡ್ಡ ಮಳೆ, ಮಹಾಸ್ವಾಮಿ. ಸಂಜೆಯ ದೀಪದ ಹೊತ್ತಿಗೆ ಪ್ರಾರಂಭವಾದುದು ಬೆಳಗಾಗುವ ವರೆಗೆ ನಿಲ್ಲಲೇ ಇಲ್ಲ. ಅದರಲ್ಲಿ ಗಾಳಿಯೂ ಕೂಡಿತು. ಹೀಗಾಗಿ ಅಲ್ಲಲ್ಲಿ ಸ್ವಲ್ಪ ಹಾನಿಯಾಗಿರಬಹುದು."

"ಸ್ವಲ್ಪ ಹಾನಿಯಲ್ಲ, ಸೇನಾಪತೀ, ಬಡವರಿಗೆ ಬಲು ಕೇಡಾಗಿದೆ. ನಗರರಕ್ಷಕರು ಇದೇ ಈಗ ಸುದ್ದಿಯನ್ನು ತಂದಿರುವರು."

"ದರಿದ್ರರ ಹಲಕೆಲವು ಗೀಳು ಮನೆಗಳು ಬಿದ್ದಿರಬಹುದು."

"ಸಾವಿರಾರು ಬಡವರು ಮನೆಗೇಡಾಗಿರುವರು, ಸೇನಾಪತೀ! ಮನೆ ಬಿದ್ದು ಅನೇಕರು ಪ್ರಾಣಕ್ಕೆ ಎರವಾಗಿದ್ದಾರೆ, ಎಷ್ಟೋ ಜನರ ಜೀವವು ಗಂಡಾಂತರದಲ್ಲಿದೆ. ಅನೇಕಾನೇಕರು ಚಿಕ್ಕಪುಟ್ಟ ಗಾಯಗಳಿಂದ ಬಳಲುತ್ತಿದ್ದಾರೆ; ದನಕರುಗಳೂ ಸತ್ತಿರುತ್ತವೆ ಮತ್ತು ಗಾಯಗೊಂಡಿರುತ್ತವೆ. ಕಾಳುಕಡಿ, ಬಟ್ಟೆ ಮೊದಲಾದ ಜೀವನದ ವಸ್ತುಗಳು ಹಾಳಾಗಿರುತ್ತವೆ. ಇನ್ನೂ ಏನೇನು ಅನಾಹುತವೋ!"

"ಮಹಾಸ್ವಾಮಿ, ಇದೆಲ್ಲವನ್ನು ತಪ್ಪಿಸುವುದು ಯಾರಿಗೆ ತಾನೇ ಸಾಧ್ಯವು? ದರಿದ್ರರ ದೌರ್ಬಲ್ಯಕ್ಕೆ ಯಾರೇನು ಮಾಡಬೇಕು? ತಮ್ಮ ಮನೆ-

ಗಳನ್ನು ಭದ್ರವಾಗಿಟ್ಟುಕೊಳ್ಳಲು ಸಾಮರ್ಥ್ಯವಿಲ್ಲದಾದ ಮೇಲೆ ಬಂದು ದನ್ನು ಅನುಭವಿಸಲೇಬೇಕಲ್ಲವೆ ಅವರು ?"

"ಇದೇನು ಮಾತು, ಸೇನಾಪತೀ ? ಬಡವರಾದುದೇ ಅವರ ತಪ್ಪೊ? ನಾವು ಇಷ್ಟೊಂದು ಸಿರಿವಂತರೆಂದು ಅವರಿಗೆ ಈ ಬಡತನವಲ್ಲವೇ ? ಇರಲಿ. ಈಗ ತತ್ತ್ವದ ಮಾತುಗಳು ಬೇಡ. ಅವರ ದುಃಖವು ಹಗುರಾಗಲು ನಮ್ಮ ಕರ್ತವ್ಯವನ್ನು ಮಾಡುವ. ಈಗ ನೀವು ಹೊರಡಿರಿ, ಊರಲ್ಲೆಲ್ಲ ಸಂಚರಿಸಿರಿ. ಸಂತ್ರಸ್ತರಿಗೆ ಎರಡು ಸಮಾಧಾನದ ಮಾತುಗಳನ್ನು ಹೇಳಿರಿ. ಯಾರಿಗೆ ಯಾವ ಪರಿಹಾರವು ಬೇಕೋ ಅದನ್ನು ಅವರಿಗೆ ಕೊಡಿರಿ. ದುಃಖದ ತೀವ್ರತೆಯನ್ನು ಮಂದವಾಗಿಸಿರಿ. ರಾಜನು ಜನರ ದುಃಖದಲ್ಲಿ ಭಾಗಿಯಾಗಿರುವನೆಂದು ಸಾರಿರಿ. ಅವರಿಗೆ ಅನ್ನ-ವಸ್ತ್ರಗಳನ್ನು ಒದಗಿಸಿರಿ. ಬಿದ್ದ ಮನೆಗಳಲ್ಲಿಯ ವಸ್ತುಗಳು ಕೇಡಿಗರ ಕೈಗೆ ಬೀಳದಂತೆ ನೋಡಿಕೊಳ್ಳಿರಿ. ಮಣ್ಣು, ಕಲ್ಲು, ಕಟ್ಟಿಗೆಗಳಲ್ಲಿ ಸಿಕ್ಕಿದ ಜೀವಿಗಳನ್ನು ಬಲು ಎಚ್ಚರದಿಂದ ಮತ್ತು ಆದಷ್ಟು ಬೇಗನೆ ಹೊರಗೆ ತೆಗೆಯಿರಿ. ಆದ ಹಾನಿಯನ್ನು ತುಂಬಿಕೊಡಲು ರಾಜನು ಯತ್ನಿಸುವನೆಂದು ಆಶ್ವಾಸನವನ್ನು ಕೊಡಿರಿ. ರಾಜೋದ್ಯಾನದ ಮುಂದಿನ ವಿಶಾಲವಾದ ಬಯಲಿನಲ್ಲಿ ಹೊಸ ಮನೆಗಳನ್ನು ಕಟ್ಟಿಸುವ ವ್ಯವಸ್ಥೆಯಾಗುವುದೆಂದು ಪ್ರಕಟಿಸಿರಿ, ಮತ್ತು ಆ ಯೋಜನೆಯನ್ನು ಬೇಗನೆ ಕೈಯಲ್ಲಿ ತೆಗೆದುಕೊಳ್ಳಿರಿ.

"ಮಹಾಸ್ವಾಮಿ, ಜನರಿಗೆ ನಾವು ಈ ವಚನವನ್ನು ಕೊಡಬಹುದೆ ?"

"ಏಕೆ ಕೊಡಲಾಗದು, ಸೇನಾಪತೀ ?"

"ಮಹಾಸ್ವಾಮಿ, ಇದಕ್ಕೆಲ್ಲ ಹಣವು ಎಲ್ಲಿಂದ ಬರಬೇಕು ?"

"ರಾಜ್ಯದ ಬೊಕ್ಕಸದಿಂದ."

"ಕ್ಷಮಿಸಬೇಕು, ಮಹಾಸ್ವಾಮಿ. ರಾಜ್ಯದ ಬೊಕ್ಕಸದ ಹಣವು ರಾಜ್ಯದ ಪ್ರತಿಷ್ಠೆಯ ಪಾಲನೆಗಾಗಿ, ಸಂಸ್ಕೃತಿಯ ಸಂವರ್ಧನಕ್ಕಾಗಿ."

"ಜನತೆ ಕಷ್ಟದಲ್ಲಿ ನರಳುತ್ತಿರುವಾಗ, ಎಲ್ಲಿದೆ ನಿಮ್ಮ ಪ್ರತಿಷ್ಠೆ, ಮತ್ತು ಯಾರಿಗೋಸುಗ ನಿಮ್ಮ ಸಂಸ್ಕೃತಿ ? ಸೇನಾಪತೀ, ಅಪ್ರಸ್ತುತವಾದಕ್ಕೆ ಇದು ಸಮಯವಲ್ಲ. ಜನತೆ ನನ್ನ ಪ್ರಾಣವು. ಯಾರು ಬಲ್ಲರು ಎಂತಹ ರತ್ನಗಳನ್ನು ಈ ಸತ್ತವರಲ್ಲಿ ರಾಜ್ಯವು ಕಳೆದುಕೊಂಡಿದೆಂಬುದನ್ನು ?"

“ ದರಿದ್ರರಲ್ಲಿಯೂ ರತ್ನಗಳೆ ? ”

“ ಸೇನಾಪತೀ, ಎಂದಿನಿಂದ ಬಂದಿತು ನಿಮಗೆ ಈ ದೃಷ್ಟಿಮಾಂದ್ಯವು? ಆದರೆ ಈ ಮಾತನ್ನು ಈಗ ಬಿಟ್ಟುಬಿಡುವ. ಮೊದಲು ಪರಿಹಾರಕಾರ್ಯ ವನ್ನು ಕೈಕೊಳ್ಳಿರಿ. ಇದು ನನ್ನ ಆಜ್ಞೆ! ”

ರಾಜನಿಷ್ಠನಾದ ಸೇನಾಪತಿ ನಿರುಪಾಯನಾಗಿ ರಾಜಾಜ್ಞೆಯನ್ನು ನೆರ ವೇರಿಸಲು ರಾಜಮಂದಿರದಿಂದ ಹೊರಹೊರಟನು.

———

೭

ಮನುಷ್ಯನಿಗೆ ಕೆಲವೊಂದು ಪರಿಸ್ಥಿತಿಯಲ್ಲಿ ಕಾಲವು ಹೋದುದೇ ಗೊತ್ತಾಗುವುದಿಲ್ಲ, ಅಷ್ಟು ವೇಗದಿಂದ ಹೋಗುತ್ತದೆ. ಮತ್ತು ಕೆಲ ವೊಂದು ಪರಿಸ್ಥಿತಿಯಲ್ಲಿ ಕಾಲವು ಹೋಗುವುದೇ ಇಲ್ಲವೆಂಬಂತೆ ಎನಿಸುತ್ತದೆ, ಅಷ್ಟು ಮಂದವಾಗಿ ಹೋಗುತ್ತದೆ. ನಿಜವಾಗಿ, ಕಾಲವು ಹೋಗವುದೆಂಬ ಮಾತು ಯಥಾರ್ಥವಲ್ಲ. ಕಾಲವು ಅನಂತವಾಗಿರುವುದು, ಅಮರ್ಯಾದವಾ- ಗಿರುವುದು. ಅದು ಅಂದೂ ಇತ್ತು, ಇಂದೂ ಇದೆ, ಮುಂದೆಯೂ ಇರುವುದು. ಅದು ಅಲ್ಲಿಯೂ ಇದೆ, ಇಲ್ಲಿಯೂ ಇದೆ, ಎಲ್ಲೆಲ್ಲಿಯೂ ಇದೆ. ಸರಿದಾಡಲು ಆಸ್ಪದವಿದ್ದರಲ್ಲವೆ ಹೋಗುವ ಮಾತು ? ಹೋಗುವವರು ಕಾಲದ ತೆರೆಗಳಂ- ತಿರುವ ನಾನು, ನೀನು, ಅವನು, ಅವಳು, ಅದು–ಎಲ್ಲರು, ಎಲ್ಲವು. ಅದ್ಭುತವಾದ ಕಾಲದ ಮಹಿಮೆಯಿಂದ ಭ್ರಾಂತಿಗೊಂಡ ನಾವು ಕಾಲದ ಗತಿ ಯನ್ನು ಕುರಿತು ಏನನ್ನೋ ಮಾತನಾಡುತ್ತೇವೆ, ಮತ್ತು ನಾವು ಹೋಗುವೆ ವೆಂಬುದನ್ನು ಕಾಲವು ಹೋಗುವುದೆಂದು ಹೇಳುತ್ತೇವೆ. ಸತ್ಯವನ್ನು ಯಥಾ ರ್ಥವಾಗಿ ಹೇಳಲು ಶಕ್ತಿಯಿಲ್ಲದವರಾದ ನಮ್ಮದು ಇದೊಂದು ವಿಚಿತ್ರ ಪದ್ಧತಿ!

ಅಂತು ಮಂದವಾಗಿಯೊ ಶೀಘ್ರವಾಗಿಯೊ ಕಾಲವೇನೋ ಹೋಯ್ತು.

ಒಂದು ಹೊಲದಲ್ಲಿ ಗುಡಿಸಲೊಳಗೆ ಹದಿನಾರು ವರ್ಷದ ಹುಡಿಗೆ- ಯೊಬ್ಬಳು ಕೆಲಸ ಮಾಡುತ್ತಿರುವಳು. ಹನ್ನೆರಡು ವರ್ಷದ ಅವಳ ತಮ್ಮನು ಎಂಟು ವರ್ಷದ ತಂಗಿಯೊಡನೆ ಹೊರಗೆ ನಗುತ್ತ ಕೆಲೆಯುತ್ತ ಆಟವಾಡುತ್ತಿರು

ವನು. ಅವರ ತಂದೆ-ತಾಯಿಗಳು ಹೊಲದಲ್ಲಿ ಕೆಲಸವಮಾಡುತ್ತಿರುವರು. ಬಳಿಯಲ್ಲಿಯೆ ನಾಲ್ಕು ವರ್ಷದ ಹುಡುಗನೊಬ್ಬನು ಹೂವಿನಿಂದ ಹೂವಿಗೆ ಹಾರುತ್ತಿರುವ ಪಾತರಗಿತ್ತಿಯನ್ನು ನೋಡಿ ಕೇಕೆ ಹಾಕಿ ಕುಣಿಯುತ್ತಿರುವನು. ಇದು ಬೀರನಾಯಕನ ಸಂಸಾರವು.

" ಕಾಲಿಂದೀ, ನನ್ನನ್ನು ಕ್ಷಮಿಸುವೆಯಾ ? " ಮೌನಗೊಂಡಿದ್ದ ಬೀರನಾಯಕನು ಒಮ್ಮಿಂದೊಮ್ಮೆ ಎಂದನು.

" ಯಾವ ತಪ್ಪಿಗೋಸುಗ, ನಾಯಕರೇ, ? "

" ಎಷ್ಟೊಂದು ನಿನಗೆ ಕಷ್ಟ ಕೊಡುತ್ತಿರುವೆನಲ್ಲಾ ! ಹೀಗೆ ಬಿಸಿಲು-ಚಳಿ-ಮಳೆ-ಗಾಳಿಯೆನ್ನದೆ ದುಡಿಯಬೇಂದು ಶಿವನಾಯಕರು ನಿನ್ನನ್ನು ನನಗೆ ಕೊಟ್ಟರೆ ? ಅವರು ಈಗ ನಮ್ಮನ್ನು ನೋಡಿದರೆ ಏನೆನ್ನಬಹುದು ? "

" ಗಂಡನ ನೆರಳಲ್ಲಿ ಸಂಸಾರ ಮಾಡುತ್ತಿರುವ ಹೆಂಡತಿಗೆ ಕಷ್ಟವೆ? ನಾಯಕರೆ, ಹೆಣ್ಣಿನ ಹೃದಯವನ್ನು ನೀವು ಅರಿಯರಿ. ಸುಖಕ್ಕೆ ಸ್ತ್ರೀ ಹಂಬಲಿಸಳು. ಅವಳಿಗೆ ಬೇಕಾದುದು ಹಿರಿಯರ ಪ್ರೇಮವು, ಪತಿಯ ಪ್ರೇಮವು, ಮಕ್ಕಳ ಪ್ರೇಮವು. ನೆರೆಯ ಜನರು ಸಂಪನ್ನೆಯೆಂದರೆ ಅದುವೆ ಅವಳಿಗೆ ಸ್ವರ್ಗವು. ತಂದೆ-ತಾಯಿಗಳಿಗೆ ನಾನು ಪ್ರೀತಿಯ ಮಗಳು, ನಾಯಕರಿಗೆ ನಾನು ಜೀವವು, ನನ್ನ ಮಕ್ಕಳ ಪ್ರೇಮವನ್ನು ಬಣ್ಣಿಸಲು ನನಗೆ ಮಾತುಗಳು ಸಾಲವು. ಅಹುದೋ ಅಲ್ಲವೊ, ರಂಗನಾಯಕಾ ?" ಎನ್ನುತ್ತ ಕಾಲಿಂದಿ ಮಗುವನ್ನು ಬಳಿಗೆ ಎಳೆದುಕೊಂಡು, "ನನ್ನ ಬಂಗಾರ!" ಎನ್ನುತ್ತ ಮುದ್ದಿಟ್ಟಳು.

ಬೀರನಾಯಕನ ಕಣ್ಣುಗಳಲ್ಲಿ ಆನಂದದ ಹನಿಗಳು ಉಕ್ಕಿದುವು.

" ನಿಜವಾಗಿಯೂ ನೀನು ಸಂಪನ್ನೆ, ಕಾಲಿಂದೀ ! ಈ ನಿರ್ಭಾಗ್ಯನ ಕಷ್ಟದಲ್ಲಿ ಪಾಲುಗಾರ್ತಿಯಾಗಿ ಇಷ್ಟು ಸಮಾಧಾನಪೂರ್ಣಳಾಗಿ ಇರುತ್ತಿರುವೆಯಲ್ಲ! ನಿನ್ನ ಭಾಗ್ಯವು ವಿಲಕ್ಷಣವಾದುದು. "

"ನನ್ನನ್ನು ಭಾಗ್ಯವಂತಿಯಾಗಿ ಮಾಡಿದ ನನ್ನ ಗಂಡನು ನಿರ್ಭಾಗ್ಯನಲ್ಲ!"

" ಸಾಧ್ವಿಯ ಮಾತು ಸಫಲವಾಗಲಿ! " ಗಂಡನು ಹೆಂಡತಿಯನ್ನು ಆದರದಿಂದಲೂ ಪ್ರೇಮದಿಂದಲೂ ಕಣ್ತುಂಬಿ ನೋಡಿದನು. ಕಾಲಿಂದಿಯ ಮುಖದ ಮೇಲೆ ಮುಗುಳ್ನಗೆಯ ವೈಭವವು! ಈ ಸನ್ನಿವೇಶವನ್ನು ವರ್ಣಿಸಲು ನನ್ನಲ್ಲಿ ಸಾಮರ್ಥ್ಯವಿಲ್ಲ. ಒಂದು ಮಾತಿನಲ್ಲಿ ಹೇಳುವೆನು.—ಇದು ಪಾವನವಾದ ಸನ್ನಿವೇಶವು!

ಸ್ವಲ್ಪ ಹೊತ್ತಾದ ಬಳಿಕ ಕಾಲಿಂದಿ ಎಂದಳು, "ಕಾಲಿಂಗಣ್ಣನು ಬರುವ ಹೊತ್ತಾಯ್ತು. ಅವನು ಬರುವ ಮೊದಲೆ ನಾವು ಗುಡಸಲಿಗೆ ಹೋಗುವ."

"ಅಹುದು, ಹೊರಡುವ."

"ಬನ್ನಿ, ರಂಗನಾಯಕರೇ," ಎನ್ನುತ್ತ ಕಾಲಿಂದಿ ಮಗುವನ್ನು ಎತ್ತಿಕೊಂಡಳು. ಸ್ವಲ್ಪ ವೇಳೆಯಲ್ಲಿ ಅವರು ಗುಡಿಸಲಿಗೆ ಬಂದರು.

ಸೂರ್ಯನು ಮುಳುಗುವ ಹೊತ್ತಿಗೆ ರತ್ನನಾಯಕನು ಕಾಲಿಂಗನು ಬರುತ್ತಿರುವುದನ್ನು ಕಂಡು, "ಕಾಲಿಂಗಮಾಮಾ ಬಂದಾ, ಕಡಲೆ ಬೆಲ್ಲಾ ತಂದಾ," ಎಂದು ಹಾಡುತ್ತ ಚಪ್ಪಳೆಯಿಕ್ಕುತ್ತ ಕುಣಿಯತೊಡಗಿದನು. ಎಲ್ಲರೂ ಕಾಲಿಂಗನನ್ನು ಸ್ವಾಗತಿಸಲು ಹೊರಗೆ ಬಂದು ನಿಂತರು. ಮುಗುಳ್ನಗೆಯ ಕಾಲಿಂಗನು ಧಾವಿಸಿ ಬಂದು ರಂಗನಾಯಕನನ್ನು ಎತ್ತಿಕೊಂಡು ಮುದ್ದಿಟ್ಟು, ಹೆಗಲ ಮೇಲೆ ಕುಳ್ಳಿರಿಸಿಕೊಂಡನು. ಏನು ರಂಗನಾಯಕನ ಆನಂದವದು! ಐರಾವತವನ್ನು ಏರಿ ಕುಳಿತ ಇಂದ್ರಪುತ್ರ ಜಯಂತನಿಗಾದರೂ ಆ ಆನಂದವು ಇರಬಹುದೇ? ಕಾಲಿಂಗನು ನಿಜವಾಗಿಯೂ ಕಡಲೆ ಬೆಲ್ಲವನ್ನು ತಂದಿದ್ದನು. ಅದನ್ನು ಅವನು ರತ್ನನಾಯಕಿಯ ಕೈಯಲ್ಲಿ ಕೊಟ್ಟನು. ಅವಳು ಇಬ್ಬರು ತಮ್ಮಂದಿರಿಗೂ ತಂಗಿ ರಂಗನಾಯಕಿಗೂ ಹಂಚಿ ತಾನೂ ಒಂದು ಮುಷ್ಟಿ ತೆಗೆದುಕೊಂಡಳು.

ಅಂದು ರಾತ್ರಿ ಹಬ್ಬದ ಊಟ. ಎಲ್ಲರ ಮುಖದ ಮೇಲೆ ಆನಂದವು ಒಡಮೂಡಿತ್ತು. ಸರಲ ಹೃದಯದ ಕಾಲಿಂಗನು ಎಲ್ಲರ ಅಂತಃಕರಣವನ್ನು ಸೆಳೆದುಕೊಂಡಿದ್ದನು. ಅವನು ಸ್ವಭಾವತಃ ಮಿತಭಾಷಿ, ಆದರೆ ಬೀರನಾಯಕನಲ್ಲಿ ಬಂದಾಗ, ಅದರಲ್ಲೂ ತಾನು ತಂಗಿಯೆಂದು ಮನ್ನಿಸಿದ ಕಾಲಿಂದಿಯ ಇದಿರಲ್ಲಿ, ಅವನ ಆ ಸ್ವಭಾವವು ಎಲ್ಲಿ ಹೋಗುತ್ತಿತ್ತೋ! ತಂಗಿ ಮಾಡಿದ ಯಾವ ಪದಾರ್ಥವೇ ಇರಲಿ, ಅದು ಅವನಿಗೆ ಅಮೃತವು! "ತಂಗೀ, ನಿನ್ನ ಅಡಿಗೆಗೆ ಈ ಸವಿ ಹೇಗೆ ಬರುತ್ತದಮ್ಮಾ?" ಎಂದು ಅವನು ಬಾಯಿ ಚಪ್ಪರಿಸುತ್ತ ಎಂದನು.

"ನನ್ನ ಪ್ರೇಮದ ಅಣ್ಣನ ನಾಲಗೆಯನ್ನು ಮುಟ್ಟಿದೊಡನೆ ನನ್ನ ಎಲ್ಲ ಪದಾರ್ಥಗಳೂ ಸವಿಯಾಗವುವು. ಪದಾರ್ಥಗಳಲ್ಲಿ ಸವಿ ಬರುವುದು ಮಾಡುವ ಕೈಯಿಂದಲ್ಲ, ಉಣ್ಣುವ ನಾಲಗೆಯಿಂದ," ಕಾಲಿಂಧಿ ಎಂದಳು.

“ ಅಹುದು ಕಾಲಿಂಗಾ, ಕಾಲಿಂದಿ ಹೇಳುವ ಮಾತು ನಿಜವು:—ಸವಿ ಬರುವುದು ನಾಲಗೆಯಿಂದ, ಕೈಯಿಂದಲ್ಲ. ನಾನೇನು ಅಡಿಗೆಯಲ್ಲಿ ನುರಿತವನಲ್ಲ. ಆದರೆ ಒಮ್ಮೊಮ್ಮೆ ಅಡಿಗೆ ಮಾಡುವ ಪ್ರಸಂಗವು ನನಗೆ ಬರುತ್ತದೆ. ಅಂದಿನ ಅಡಿಗೆಯೆಂದರೆ ಅಡಿಗೆ! ಅನ್ನವು ಹೊತ್ತಿರುತ್ತದೆ, ಇಲ್ಲವೆ ಸಾರಿಗೆ ಉಪ್ಪು ಹೆಚ್ಚು. ನನ್ನ ಭಕ್ಕರಿಯೊ? ಅದಕ್ಕೆ ಐದು ಮೂಲೆ! ಒತ್ತಟ್ಟಿಗೆ ಹೊತ್ತಿರುತ್ತದೆ, ಒತ್ತಟ್ಟಿಗೆ ಬೆಂದಿರುವುದಿಲ್ಲ. ಆದರೆ ಈ ಕಾಲಿಂದಿಗೆ ಅದೆಲ್ಲವೂ ಸವಿ!” ಬೀರನಾಯಕನು ಎಂದನು.

“ ಕಾಲಿಂದೀ, ಒಮ್ಮೆ ಹೇಳಿಬಿಡು ಬೀರನಾಯಕನಿಗೆ, ನಿಮ್ಮ ಅಡಿಗೆ ರುಚಿಯಾಗಿಲ್ಲವೆಂದು!

“ ಅಣ್ಣಾ, ನಾನು ಸುಳ್ಳು ಹೇಳಲಾ? ಇವರೇನೊ ಅಡಿಗೆಯಲ್ಲಿ ನುರಿತವರಲ್ಲ. ಆದರೆ ಇವರ ಅಡಿಗೆಯಲ್ಲಿ ರುಚಿ ಇರುವುದು ಸುಳ್ಳು ಅಲ್ಲ. ನಾನು ಹೇಳುವುದು ನಿಜವಲ್ಲವೇ, ರಂಗನಾಯಕೀ?”

“ ಅಹುದು, ನಿಜವು. ಕಾಲಿಂಗಮಾಮಾ, ಅಮ್ಮನು ಹೇಳುವುದು ನಿಜವು.”

“ ರತ್ನನಾಯಕೀ, ನಿನ್ನ ಅಡಿಗೆಗೂ ಅಮ್ಮನ ಅಡಿಗೆಯಂತೆಯೆ ರುಚಿ ಇರುವುದೇನಮ್ಮಾ?” ಕಾಲಿಂಗನೆಂದನು.

“ ಅಮ್ಮನ ಅಡಿಗೆ, ಅಪ್ಪನ ಅಡಿಗೆ, ಅಕ್ಕನ ಅಡಿಗೆ, ಎಲ್ಲರ ಅಡಿಗೆಯೂ ರುಚಿಯಾಗಿರುತ್ತದೆ,” ರತ್ನನಾಯಕನೂ ರಂಗನಾಯಕಿಯೂ ಎಂದರು.

“ ಎಲ್ಲರ ಅಡಿಗೆ? ನೀವೂ ಕಲಿತಿದ್ದೀರಾ ಅಡಿಗೆ ಮಾಡಲು?”

“ ನಾವು ಊಟ ಮಾಡಲು ಕಲಿತಿದ್ದೇವೆ, ಕಾಲಿಂಗಮಾಮಾ. ನೋಡು ನಮ್ಮ ಎಲೆಯ ಕಡೆಗೆ. ನಾವಾದರೂ ನಿಮ್ಮಂತೆ ಎಲೆಯಲ್ಲಿ ಏನನ್ನೂ ಚೆಲ್ಲಿಲ್ಲ!” ರತ್ನನಾಯಕನು ಹೇಳಿದನು.

ಎಲ್ಲರೂ ಖೊಳ್ಳೆಂದು ನಕ್ಕರು.

ಊಟವು ಮುಗಿಯಿತು. ಎಲ್ಲರೂ ಕೈ ತೊಳೆದುಕೊಳ್ಳಲು ಎದ್ದರು.

೮

ಮರುದಿನ ಬೆಳಗಿನಲ್ಲಿ ಬೀರನಾಯಕನೂ ಕಾಲಿಂಗನೂ ಹೊಲದೊಳಗೆ ಹೋದರು. ಸ್ವಲ್ಪ ಹೊತ್ತು ಇಬ್ಬರೂ ಕೆಲಸ ಮಾಡಿ ಅಲ್ಲಿಯೇ ಒಂದು

ಮರದ ನೆರಳಿನಲ್ಲಿ ಬಂದು ಕುಳಿತರು. ಬೀರನಾಯಕನು ಕಾಲಿಂಗನ ಹೆಗಲ ಮೇಲೆ ಕೈಯಿರಿಸಿ ಎಂದನು, "ಕಾಲಿಂಗಾ, ನೀನು ನನ್ನ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಂಡೆ, ನನಗೆ ಬದುಕುವ ದಾರಿಯನ್ನು ತೋರಿಸಿದೆ, ನನ್ನ ಹೃದಯಕ್ಕೆ ಸಮಾಧಾನವನ್ನು ಒದಗಿಸಿದೆ, ಕಾಲಿಂದಿಗೆ ಪ್ರೇಮದ ಅಣ್ಣನಾದೆ. ನಾವಿಬ್ಬರೂ, ಅದೇಕೆ, ನನ್ನ ಇಡಿಯ ಸಂಸಾರವು ನಿನ್ನ ಉಪಕಾರ—"

"ಬೀರನಾಯಕಾ. ಅನುತಾಪದಿಂದ ನೀನು ಮೊದಲಿನ ಬೀರನಾಯಕನಾದೆ. ಎಂತಹ ಪ್ರೇಮವು ನಿನ್ನದು! ಕಾಲಿಂದಿಯಂತಹ ಮಹಾಸಾಧ್ವಿಯ ಹೃದಯವನ್ನು ನೀನು ಸೆಳೆದಿರುವೆಯಲ್ಲ! ನಿನ್ನನ್ನು ಮತ್ತು ನಿನ್ನ ಸಂಸಾರವನ್ನು ಕಣ್ಣಾರೆ ಕಂಡು ಆನಂದಪಟ್ಟ ನನ್ನ ಗುರು—"

"ಏನೆಂದೆ, ಕಾಲಿಂಗಾ? ನಿನ್ನ ಗುರು ನನ್ನ ಸಂಸಾರವನ್ನು ಕಂಡಿರುವರೋ ?"

"ಒಮ್ಮೆ ಅಲ್ಲ, ಹಲವಾರು ಸಲ."

"ನನಗೆ ಇದು ಹೇಗೆ ಗೊತ್ತಾಗಲಿಲ್ಲ ?"

"ಗೊತ್ತಾಗುವ ಸಮಯವು ಬಂದಿರಲಿಲ್ಲವೆಂದು."

"ಎಂದು ಬರುವುದು, ಕಾಲಿಂಗಾ ?"

"ಎಂದು ಬರುವುದೆಂಬುದನ್ನು ಗುರುದೇವನು ಬಲ್ಲರು. ಬೇಗನೆ ಬರುವುದೆಂದು ನಾನು ನಂಬಿದ್ದೇನೆ."

"ಗುರುದೇವನನ್ನು ಆಗಾಗ ಪ್ರತ್ಯಕ್ಷವಾಗಿ ಕಾಣುವ ನೀನು ಧನ್ಯನು!"

"ಗುರುದೇವನ ಹೃದಯದಲ್ಲಿ ವಾಸವಾಗಿರುವ ಬೀರನಾಯಕನೂ ಧನ್ಯನು !"

"ಅಮೃತದ ಮಳೆಯನ್ನೇ ಕರೆಯುತ್ತಿರುವೆ, ಕಾಲಿಂಗಾ !"

"ಅಮೃತದ ಮಳೆಯನ್ನು ಕರೆಯುತ್ತಿರುವವನು ನಾನಲ್ಲ, ನಿನ್ನ ಪುಣ್ಯದ ಮೇಘವು."

"ಪುಣ್ಯಾತ್ಮನಾದ ನಿನ್ನ ಆಶ್ರಯವು ದೊರೆತುದರ ಫಲವು ಇದು."

"ದೇವದೇವನ ಕೃಪೆಯ ಫಲವು, ಬೀರನಾಯಕಾ ! ಅನುತಾಪದ ಮಹಿಮೆ ಅಗಾಧವಾದುದು, ಅದ್ಭುತವಾದುದು !"

ಇಬ್ಬರೂ ದಿವ್ಯಾನಂದದ ಅನುಭವದಲ್ಲಿ ಕೆಲಹೊತ್ತು ಮೈಮರೆತರು. ಮೂರನೆಯದೊಂದು ವ್ಯಕ್ತಿ ಆ ಆನಂದದ ವಾತಾವರಣದಲ್ಲಿ ತಾನೂ ಮೈಮರೆತಿದ್ದಿತು. ಕಾಲಿಂದಿ ಅಲ್ಲಿಗೆ ಬಂದುದು ಅವರಿಗೆ ಗೊತ್ತಾಗಿರಲಿಲ್ಲ.

ಆಗ ಅಂತರಿಕ್ಷದಲ್ಲಿ ಗಿಳಿಗಳ ಹಿಂಡು ಚಿವುಗುಡುತ್ತ ಹಾರುತ್ತ ಹೋಯ್ತು. ಕಾಲಿಂಗನು ನೋಡಲು ಮುಖವೆತ್ತಿದನು. ಕಾಲಿಂದಿ ನಿಂತು ದನ್ನು ಕಂಡು ಅವನು, "ಕುಳಿತುಕೊಳ್ಳು, ತಂಗೀ, ನಮ್ಮ ಆನಂದದಲ್ಲಿ ನೀನು ಪಾಲುಗಾರ್ತಿಯಾಗು," ಎಂದನು.

"ಅಣ್ಣಾ, ಅಂದು ನೀನು ನನ್ನನ್ನು ಕಂಡು ತಂಗಿಯೆಂದು ಕರೆಯಲು ಮೊದಲು ಮಾಡಿದೆ. ಇಂದಿಗೆ ಹನ್ನೆರಡು ವರ್ಷಗಳ ಮೇಲಾಯ್ತು ಅಂದಿ ನಿಂದ ನಾನೂ ನನ್ನ ಸಂಸಾರವೂ ಯಾವುದಕ್ಕೂ ಕೊರತೆಯಿಲ್ಲದೆ ಆನಂದದಿಂದ ಇದ್ದೇವೆ. ಇಂದಿನ ಈ ಆನಂದವು ದಿವ್ಯವಾದುದು. ನಿನ್ನಂತಹ ಮಿತ್ರನನ್ನು ಪಡೆದ ನನ್ನ ಪತಿ ಧನ್ಯರು. ಅವರ ಪತ್ನಿಯಾದ ನಾನು ನಿನ್ನ ತಂಗಿಯಾಗಿರು ವುದು ನನ್ನ ಯಾವ ಜನ್ಮದ ಪುಣ್ಯದ ಫಲವೋ? ಅಣ್ಣಾ, ಈ ಸಂಬಂಧವು ನನಗೆ ಜನ್ಮ ಜನ್ಮದಲ್ಲಿಯೂ ಇರಲೆಂದು ಹರಸು! ಪುಣ್ಯಾತ್ಮನಾದ ನಿನ್ನ ಹರಕೆ ಯನ್ನು ಸಫಲವಾಗಿಸಲು ದೇವದೇವನು ಬದ್ಧನಾಗಿರುವನು."

"ನೀನು ಸಾಧ್ವಿ. ನಿನ್ನ ಇಚ್ಛೆ ಸಫಲವಾಗದೆ ಇರದು, ತಾಯೀ!"

"ನಾನು ಧನ್ಯೆ! ಅಣ್ಣಾ, ಇನ್ನೊಂದು ಮಾತು; ಕೇಳಿಕೊಳ್ಳಲಾ?"

"ನೀನು ಕೇಳಿದುದನ್ನು ಕೊಡಬಲ್ಲೆನಾದರೆ, ಅದು ನನ್ನ ಭಾಗ್ಯ ವಮ್ಮಾ!"

"ಹನ್ನೆರಡು ವರ್ಷಗಳ ಹಿಂದಿನ ಮಾತು. ನೀನು ಅಂದು ಹೇಳಿದೆ, 'ನನ್ನ ವಿಷಯದಲ್ಲಾಗಲಿ, ಗುರುದೇವನನ್ನು ಕುರಿತಾಗಲಿ ಹನ್ನೆರಡು ವರ್ಷಗಳ ವರೆಗೆ ನೀವಾಗಿಯೆ ಮಾತೆತ್ತಕೂಡದು,' ಎಂದು. ನೀನು ಹಾಗೆ ಹೇಳಿದ ದಿನವೇ ರತ್ನನು ಹುಟ್ಟಿದನು. ಅವನು ಹನ್ನೆರಡು ವರ್ಷದವನಾಗಿದ್ದಾನೆ. ಈವೊತ್ತೇ ಅವನ ಹುಟ್ಟಿದ ದಿನವು. ನೀನು ಇದೇ ಈಗ ಗುರುದೇವನನ್ನು ನೆನೆದೆ. ಈಗ ನಾನು ನಿನಗೆ ಎಲ್ಲ ವೃತ್ತಾಂತವನ್ನು ಹೇಳೆಂದರೆ ತಪ್ಪಾಗದಷ್ಟೇ? ಅಣ್ಣಾ, ಹನ್ನೆರಡು ವರ್ಷ ಕುತೂಹಲವನ್ನು ತಡೆವುದು ಎಷ್ಟೊಂದು ಕಷ್ಟ-ವೆಂಬುದನ್ನು ಊಹಿಸಬಲ್ಲೆಯಾ?"

"ಅಹುದು, ತಂಗೀ, ನೀವು ವಚನವನ್ನು ಪಾಲಿಸಿದಿರಿ. ವಚನಪಾಲನದ ಫಲವು ನಿಮಗೆ ದೊರೆಯದಿರದು? ಇನ್ನು ನಿಮಗೆ ಎಲ್ಲವನ್ನೂ ಹೇಳುವೆನು.

ವೆನು. ಅಂದು ನಾನು ಹಾಗೆ ಹೇಳಿದುದು ಗುರುದೇವನ ಆಜ್ಞೆಯಿಂದ. ಇಂದು ಹೇಳುವೆನೆಂಬುದೂ ಗುರುದೇವನ ಆಜ್ಞೆಯಿಂದಲೇ. ”

“ಎಂದರೆ,ಅಂದು ನಮಗೆ ನಿನ್ನ ಭೆಟ್ಟಿಯಾದುದು ಆಕಸ್ಮಾತ್ತಾಗಿ ಅಲ್ಲ, ಅದು ಗುರ್ವಾಜ್ಞೆಯಿಂದಲೇ ಎಂದು ನಾವು ತಿಳಿಯಬೇಕೇ ? ”

“ ಅಹುದು, ಬೀರನಾಯಕಾ, ನಿನ್ನ ಊಹೆ ಸರಿಯಾಗಿದೆ. ”

“ ಎಲ್ಲವೂ ಆಶ್ಚರ್ಯಕರವಾಗಿರುವದು. ನನ್ನ ವಿಷಯವನ್ನು ಅವರು ಮೊದಲು ಹೇಗೆ ಅರಿತರು ? ನೀನು ಹೇಳಿದೆಯೆಂದು ಅಲ್ಲವೆ ? ”

“ ಅಲ್ಲ. ನನ್ನನ್ನು ಕಾಣುವ ಮೊದಲೆ ಅವರು ನನ್ನ ಮತ್ತು ನಿನ್ನ ವಿಷಯವನ್ನು ಅರಿತಿದ್ದರು. ”

“ ಇನ್ನೂ ಆಶ್ಚರ್ಯವು ! ಅದು ಹೇಗೆ ? ”

“ ಅಣ್ಣಾ, ಈಗ ಸ್ನಾನಕ್ಕೆ ಹೊತ್ತಾಯ್ತು. ಊಟವಾದ ಬಳಿಕ ಎಲ್ಲ ವನ್ನು ಆರಾಮವಾಗಿ ಕೇಳುವ,” ಕಾಲಿಂದಿ ಎಂದಳು.

“ ಅಹುದು, ತಂಗೀ, ಹೊರಡುವ. ಆದರೆ ಒಂದು ಮಾತು. ಊಟ ವಾದ ಬಳಿಕ ನನಗೆ ಸಂಜೆಯವರೆಗೆ ಬಿಡುವು ಬೇಕು. ನಾನು ಹೋಗಿ ಸಂಜೆಗೆ ಆರುತಿಯ ಹೊತ್ತಿಗೆ ತಿರುಗಿ ಬರುವೆನು. ರಾತ್ರಿ ಊಟವಾದ ತರು- ವಾಯ ಬೆಳುದಿಂಗಳಲ್ಲಿ ಹಿಂದಿನ ಕತೆಯನ್ನು ಹೇಳುವೆನು.”

“ ಹಾಗೆಯೆ ಆಗಲಿ, ಅಣ್ಣಾ.”

ಮೂವರೂ ಗುಡಿಸಲಿಗೆ ತಿರುಗಿ ಬಂದರು. ಊಟವಾದ ಬಳಿಕ ಕಾಲಿಂಗನು ಸ್ವಲ್ಪ ಹೊತ್ತು ವಿಶ್ರಮಿಸಿ ಎಲ್ಲಿಗೋ ಹೋದನು.



## ೪

ಕಾಲಿಂಗನು ಸಂಜೆಗೆ ಸರಿಯಾಗಿ ಆರತಿಯ ಹೊತ್ತಿಗೆ ಬಂದನು.

ಕಾಲಿಂದಿಯ ಮನೆಯೆಂದರೆ ಮನೆ. ಮೇಲೆ, ಕೆಳಗೆ, ಜಂತೆ, ನೆಲ, ಮೂಲೆ ಎಲ್ಲ ಎಡೆಗಳೂ ಹಸನು, ಬಲು ಹಸನು. ಸಂಸಾರಕ್ಕೆ ಎಷ್ಟು ಬೇಕು ಅಷ್ಟೇ ವಸ್ತುಗಳು. ಪ್ರತಿಯೊಂದು ವಸ್ತು ಆದರದರ ಎಡೆಯಲ್ಲಿ. ಮಕ್ಕಳ

ಬಟ್ಟೆಗಳು, ಗಂಡನ ಬಟ್ಟೆಗಳು, ತನ್ನ ಬಟ್ಟೆಗಳು ಎಲ್ಲವೂ ಇದೇ ಈಗ ಅರಳಿದ ಹೂ ! ಎಲ್ಲಿ ನೋಡಿದರೂ ಆಕೆಯ ಕೈಯ ಕುಶಲತೆ ಕಂಗೊಳಿಸು-ತ್ತಿತ್ತು. ಅವಳ ಹೃದಯದಲ್ಲಿಯ ಪ್ರೇಮವು ರೂಪಗೊಂಡು ನಲಿಯುತ್ತಿತ್ತು. ಎಲ್ಲವೂ ಪ್ರಸನ್ನವಾಗಿತ್ತು. ಯಾರಾದರೂ ಹೊರಗಿನಿಂದ ಬಂದರೆ, ಆ ಪ್ರಸನ್ನತೆಯಿಂದ ಅವರ ಮನಸ್ಸೂ ಪ್ರಸನ್ನವಾಗುತ್ತಿತ್ತು. ಕಾಲಿಂದೀ, ಕೆಲಸ ವೆಂದರೆ ಪ್ರೇಮದ ದೃಶ್ಯ-ರೂಪು ಎಂದು ನಿನಗೆ ಕಲಿಸಿದ ನಿನ್ನ ಗುರುವಿನ ಅಡಿಗೆ ನಾನು ತಲೆಬಾಗುವೆನು, ತಾಯೀ!

ಕಾಲಿಂಗನು ಬೀರನಾಯಕನೊಡನೆ ಒಳಗೆ ಬಂದನು. ಆರತಿ ಮಾಡಿಸಿ ಕೊಳ್ಳಲು ಕುಳಿತಿದ್ದ ರತ್ನನಾಯಕನು ಎದ್ದು ಬಂದು ಇಬ್ಬರಿಗೂ ನಮಸ್ಕಾರ ಮಾಡಿ ಅವರ ಹರಕೆಗಳನ್ನು ತಳೆದು ಮತ್ತೆ ಹೋಗಿ ಕುಳಿತನು. ಕಾಲಿಂದಿ ಮತ್ತು ರತ್ನನಾಯಕಿ ಇಬ್ಬರೂ ಆರತಿ ಹಚ್ಚಿಕೊಂಡು ಒಳಗಿನಿಂದ ಬಂದರು. ಅವರ ಮುಖದ ಮೇಲೆ ಮುಗುಳ್ನಗೆ. ಏನು ಮುಗುಳ್ನಗೆ ಅದು ! ಅರೆಬಿರಿದ ಹೂ ! ಅರೆಬಿರಿದ ಹೂವಿನಿಂದ ಪರಿಮಳವು ಹೊರಹೊಮ್ಮಿ ಹಬ್ಬುತ್ತಿರುವಂತೆ ಆ ಮುಗುಳ್ನಗೆಯಿಂದ ಸವಿ ಹೊರಹೊಮ್ಮಿ ಹಬ್ಬುತ್ತಿದ್ದಿತು. ಮಗನ ಹುಟ್ಟು ದಿನ, ಅಣ್ಣನ ಆಗಮನ, ಆರತಿಯ ಉತ್ಸವ ! ಆ ಸಾಧ್ವಿಯಾದ ಕಾಲಿಂದಿಯ ಸಾತ್ವಿಕ ಆನಂದಕ್ಕೆ ಅವಳ ವಿಶಾಲ ಹೃದಯವು ಸಾಲದು. ಆನಂದವು ಹೊರ ಹೊಮ್ಮಿತು, ಎಲ್ಲೆಲ್ಲಿಯೂ ವ್ಯಾಪಿಸಿತು. ಅಬ್ಬಾ, ಆ ಹಾಡು ! ಅವಳ ಹೃದ ಯದ ಪಾವಿತ್ರ್ಯ, ಔದಾರ್ಯ, ಮಾಧುರ್ಯ ಇವುಗಳ ತ್ರಿವೇಣೀಸಂಗಮವು! ಮಗಳೇ, ಕಾಲಿಂದೀ, ಈ ತ್ರಿವೇಣೀ ಸಂಗಮದಲ್ಲಿ ನೀನು ನನಗೆ ಸ್ನಾನಮಾಡಿ ಸಿದೆ. ನನ್ನ ಕೃತಜ್ಞತೆಯನ್ನು ವ್ಯಕ್ತಗೊಳಿಸಲು ನನ್ನಲ್ಲಿ ಶಬ್ದಗಳಿಲ್ಲ !

ಆರತಿ ಆಯ್ತು. ಸ್ವಲ್ಪ ಹೊತ್ತಾದ ಮೇಲೆ ಎಲ್ಲರೂ ಆನಂದದಿಂದ ಊಟ ಮಾಡಿದರು. ಬಳಿಕ ಕಾಲಿಂದಿ ತನ್ನ ಕೆಲಸಗಳನ್ನು ತೀರಿಸಿ ಹೊರ ಅಂಗಳದಲ್ಲಿ ಎರಡು ಚಾಪೆಗಳನ್ನು ಹಾಸಿದಳು. ಎಲ್ಲರೂ ಬಂದು ಅಲ್ಲಿ ಕುಳಿ ತರು. ಚಂದ್ರಮನು ಹಾಲಿನ ಮಳೆಯನ್ನು ಕರೆಯುತ್ತಿದ್ದನು. ಹಗಲೆಲ್ಲ ಬಿಸಿಲಿನಿಂದ ಕಾಯ್ದ ಭೂಮಿ ಆ ಹಾಲುಮಳೆಯಿಂದ ತಂಪುಗೊಂಡು ಕುಲು-ಕುಲು ನಗುತ್ತಿದ್ದಿತು. ಭೂಮಿಯ ಆನಂದವು ಅಂಗಳದಲ್ಲಿ ಅರಳುತ್ತಿರುವ ಇರುಳುಹೂಗಳ ಪರಿಮಳವಾಗಿ ಎಳಗಾಳಿಯಲ್ಲಿ ಬೆರೆತು ಅಲ್ಲಿ ಕುಳಿತವರ ಆನಂದವನ್ನು ಹೆಚ್ಚಿಸುತ್ತಿದ್ದಿತು. ಆ ಮಾತು ಈ ಮಾತು ನಡೆದವು. ಕೇಳುತ್ತ

ಕೇಳುತ್ತ ಮಕ್ಕಳು ಅಲ್ಲಿಯೆ ಮಲಗಿದರು. ರತ್ನನಾಯಕಿ ಅವರನ್ನು ಒಳಗೆ ಒಯ್ದು ಮಲಗಿಸಿ ತಾನೂ ಮಲಗಿದಳು.

ಬಳಿಕ ಕಾಲಿಂದಿ ಎಂದಳು. "ಅಣ್ಣಾ, ನಮಗೆ ಕಷ್ಟವು ಬಂದಾಗ ದೇವನ ದಯೆ ನಮ್ಮ ನೆರವಿಗೆ ಬಾರದಿದ್ದರೆ ನಾವು ಬದುಕಬಲ್ಲೆವೇ?"

''ಅಮ್ಮಾ, ಸುಖದಲ್ಲಿ ಇರುವಾಗಲೂ ದೇವನ ದಯೆ ನಮ್ಮ ನೆರವಿಗೆ ಬಾರದಿದ್ದರೆ ನಾವು ಬದುಕಲಾರೆವು. ಸುಖವು ಬರುವದಾಗಲಿ ಕಷ್ಟವು ಬರುವದಾಗಲಿ ಅದು ನಮ್ಮ ಕರ್ಮದಿಂದ. ಆದರೆ ಸುಖದ ವೇಗವನ್ನು ಅಥವಾ ಕಷ್ಟದ ವೇಗವನ್ನು ತಡೆಯಲು ಬೇಕಾಗುವ ಮನೋಬಲವು—ಸ್ಥೈರ್ಯವು—ಬರುವದು ದೇವನ ದಯೆಯಿಂದ. ಕಷ್ಟದಲ್ಲಿ ಸಿಕ್ಕಿದ ಮನುಷ್ಯನು ಕೊರಗುತ್ತ ಸ್ಥೈರ್ಯವನ್ನು ಕಳೆದುಕೊಳ್ಳುವನು; ಸುಖವನ್ನು ಭೋಗಿಸುವ ಮನುಷ್ಯನು ಕೊಬ್ಬುತ್ತ ಸ್ಥೈರ್ಯವನ್ನು ಕಳೆದುಕೊಳ್ಳುವನು. ಕಷ್ಟದಿಂದ ಹೇಗೋ ಹಾಗೆ ಸುಖದಿಂದಲೂ ಮನುಷ್ಯನಿಗೆ ವಿಪತ್ತುಂಟು. ಆದುದರಿಂದ ಮನುಷ್ಯನು ಯಾವದೇ ಸ್ಥಿತಿಯಲ್ಲಿರಲಿ, ದೇವನ ದಯೆ ಅವನಿಗೆ ಬೇಕೇ ಬೇಕು.''

"ಅಹುದು, ಅಣ್ಣಾ ನೀನು ಹೇಳುವದು ಸತ್ಯವು. ನಿನ್ನನ್ನು ಅಂದು ಹುಡುಕಲು ಹೊರಟ ನಾವು ನಿನ್ನನ್ನು ಕಾಣುವ ವರೆಗೆ ಆ ನಾಲ್ಕು ವರ್ಷ ನಾವು ಪಟ್ಟ ಕಷ್ಟಗಳು ಅಂತಿಂತಹವೆ? ಆಗ ದೇವನು ನಮಗೆ ಹೇಗೋ ಸ್ಥೈರ್ಯವನ್ನು ಒದಗಿಸಿದನು. ನಿನ್ನನ್ನು ಕಂಡ ಬಳಿಕ ನಮಗೆ ಸುಖದ ದಿನಗಳು ಬಂದುವು. ಈ ಹನ್ನೆರಡು ವರ್ಷ ನಿರಂತರವೂ ನೀನು ನಮಗೆ ಮಾರ್ಗದರ್ಶಕನಾಗಿರುವೆ. ಇದು ದೇವನ ದಯೆ ಅಲ್ಲವೆ?"

'' ದೇವನು ನಮಗೆ ದಯೆಯನ್ನು ನೀಡಲು ಸದಾ ಸಿದ್ಧನಿರುವನು. ನಾವು ವಿನೀತರಾಗಿ ಆತನಿಗೆ ಶರಣುಹೋದರೆ ಒಂದಿಲ್ಲೊಂದು ರೂಪದಲ್ಲಿ ಆತನ ದಯೆ ನಮಗೆ ದೊರೆವುದು. ದೇವನ ದಯೆಯನ್ನು ಹೇಗೆ ಯಾಚಿಸಬೇಕೆಂಬುದನ್ನು ನಾವು ಕಲಿಯಬೇಕು, ಮತ್ತು ಆತನು ನೀಡಿದ ದಯೆಯನ್ನು ಗುರುತಿಸಿ ಆತನಿಗೆ ಕೃತಜ್ಞತೆಯನ್ನು ಸಲ್ಲಿಸಬೇಕು.

'' ಅಣ್ಣಾ, ಅಂದು ರತ್ನನಾಯಕಿ ಹುಟ್ಟುವ ದಿವಸ ನಾವು ಅನುಭವಿಸಿದ ಬವಣೆ ನೆನಪಾದರೆ ಇಂದಿಗೂ ಮೈ ಜುಮ್ಮೆನ್ನುತ್ತದೆ. ಅದು ಬಹು ಕಷ್ಟದ ಕಾಲವಾಗಿತ್ತು. ಸೇನಾಪತಿಯ ಜನರ ಕೈಗೆ ಸಿಕ್ಕಬಾರದೆಂದು

ವೇಷ ತಪ್ಪಿಸುತ್ತ ಊರಿಂದೂರಿಗೆ ಇಬ್ಬರೂ ಅಲೆಯುತ್ತ ನಡೆದಿದ್ದೆವು. ನಾನು ತುಂಬಿದ ಬಸುರಿ. ಅಂದು ನಮಗೆ ಒಂದು ಅಡವಿಯನ್ನು ದಾಟಿ ಹಳ್ಳದಾಚೆಗೆ ಇರುವ ಒಂದು ಹಳ್ಳಿಗೆ ಹೋಗಬೇಕಾಗಿತ್ತು. ಸಂಜೆಗೆ ಮೊದಲು ಅಡವಿಯನ್ನು ದಾಟಿದೆವು. ಹಳ್ಳವನ್ನು ದಾಟುವದಿದ್ದಿತು. ಇಳಿಹೊತ್ತಿನಿಂದ ನೆರೆಯಲಾರಂಭಿಸಿದ ಮೋಡಗಳು ನಾವು ಹಳ್ಳಕ್ಕೆ ಬರುವ ಹೊತ್ತಿಗೆ ದಟ್ಟಾಗಿ ಕವಿದುವು ನನಗೆ ಹೊಟ್ಟೆ ನೋಯತೊಡಗಿತು. ಹಳ್ಳದ ಮೇಲ್ಗಡೆಯಿಂದ ತಂಪಾದ ಗಾಳಿಗಳು ಬಂದವು. ನಾನು ಹೆದರಿದೆನು. ನಾವು ಇಬ್ಬರೇ ಇಬ್ಬರು. ಹಿಂದೆ ದೊಡ್ಡ ಕಾಡು, ಮುಂದೆ ಹಳ್ಳದ ಆಚೆಯ ದಂಡೆಗೆ ಊರು. ಆದರೆ ಹಳ್ಳದ ಹರವು ದೊಡ್ಡದಾಗಿತ್ತು. ಕಾಡಿನಲ್ಲಿ ಉಳಿಯಲಾಗದು. ಬೇಗನೇ ಹಳ್ಳವನ್ನು ದಾಟಿ ಊರನ್ನು ಸೇರಬೇಕೆಂದರೆ ದಾಟುತ್ತಿರುವಾಗ ಹಳ್ಳವು ಬರುವ ಭೀತಿ! ಮನಸ್ಸು ಗಟ್ಟಿಮಾಡಿ ಊರನ್ನೇ ಸೇರಲು ನಿಶ್ಚಯಿಸಿದೆವು ಹಳ್ಳವನ್ನು ದಾಟತೊಡಗಿದೆವು. ಇಬ್ಬರ ತಲೆಯ ಮೇಲೂ ಮೂಟೆ. ಮಳಲಿನಲ್ಲಿ ವೇಗವು ಕುಂಠಿತವಾಯ್ತು. ಅಂತೂ ಅರ್ಧ ಹಳ್ಳವನ್ನು ದಾಟಿ ನಡೆದಿದ್ದೆವು. ನನಗೆ ಹೊಟ್ಟೆನೋವು ಹೆಚ್ಚಿತು. ಅಷ್ಟರಲ್ಲಿ ಹನಿಯೊಡೆಯಿತು. ಹಳ್ಳದ ಮೇಲ್ಗಡೆಯಿಂದ ಸುಯ್ಯೆಂದು ಸಪ್ಪಳು ಬಂದಿತು. ನಾಯಕರು ನನ್ನ ಮುಖದ ಕಡೆಗೆ ನೋಡಿದರು. ಹರಿಯುತ್ತಿರುವ ಕಣ್ಣೀರನ್ನು ಕಂಡು ಬಲು ಮಿಡುಕಿದರು. ಓಡಲು ಅವರು ಸಮರ್ಥರು. ಆದರೆ ನಾನು ಅವರಿಗೆ ಕಾಲ್ತೊಡಕು. ಓಡಿ ಹೋಗಿ ದಂಡೆಯನ್ನು ಕಾಣಿರೆಂದು ಅವರನ್ನು ಬಗೆ ಬಗೆಯಾಗಿ ಬೇಡಿಕೊಂಡೆನು. 'ಹಳ್ಳದ ಸೆಳೆತಕ್ಕೆ ಸಿಕ್ಕಿ ಇಬ್ಬರೂ ಏಕೆ ಸಾಯಬೇಕು? ನನಗೆ ಓಡಲಾಗುವುದಿಲ್ಲವೆಂದು ಓಡಲು ಸಮರ್ಥರಾದ ನೀವು ಜೀವವನ್ನು ಏಕೆ ಕಳೆದುಕೊಳ್ಳಬೇಕು?' ಎಂದು ನಾನು ಎಷ್ಟು ಹೇಳಿದರೂ ಇವರು ಕೇಳರು. ಸಂಜೆಯ ಮಬ್ಬು ದಟ್ಟಾಗುತ್ತ ಹೋಯ್ತು. ಮೋಡಗಳ ಮುಸಕು ಬೇರೆ. ಹೇಗೋ ಸಾಗಿದೆವು. ಅಷ್ಟರಲ್ಲಿ ಅಡಿಯ ಕೆಳಗೆ ನೀರು ಬಂದಿತು. ನಾನು ಜೀವದ ಆಶೆಯನ್ನು ತೊರೆದೆನು. ನನ್ನ ಕೈ ಅವರ ಕೈಯಲ್ಲಿ ಇತ್ತು. ಕಸುವಿನ ಮಳೆ, ಏರುವ ನೀರು; ಕತ್ತಲೆಯಲ್ಲಿ ದಂಡೆಯೂ ಕಾಣಿಸದು! 'ಸಮೀಪದಲ್ಲಿ ಸಮರ್ಥರು ಯಾರಾದರೂ ಇದ್ದರೆ ನಮ್ಮನ್ನು ಬದುಕಿಸಿಕೊಳ್ಳಿರಿ!' ಎಂದು ನಾಯಕರು ಕೂಗಿದರು. ಸ್ವಲ್ಪ ವೇಳೆಯಲ್ಲಿ ಮೂವರು ಜನರು ಧಾವಿಸಿ ಬಂದು, ಹೆದರಬೇಡಿರಿ ಎನ್ನುತ್ತ ನಮ್ಮನ್ನು

ದಂಡೆಗೆ ತಂದರು. ಆ ದಯಾಳುಗಳು ನಮ್ಮನ್ನು ಬದುಕಿಸಿದರು. ನಾಯಕರು ನನ್ನ ಸ್ಥಿತಿಯನ್ನು ಅವರಿಗೆ ತಿಳಿಸಿ ಅವರ ಸಾಹಾಯ್ಯವನ್ನು ಯಾಚಿಸಿದರು. ಅವರಲ್ಲಿ ಒಬ್ಬರು, 'ಯಾವುದಕ್ಕೂ ಚಿಂತೆ ಬೇಡ. ಎಲ್ಲವೂ ಕ್ಷೇಮ-ವಾಗುವುದು. ಬನ್ನಿರಿ,' ಎಂದು ನಮ್ಮನ್ನು ಒಂದು ಮನೆಗೆ ತಂದರು. ಅಲ್ಲಿ ನನ್ನ ತಾಯಿಯ ವಯಸ್ಸಿನ ಒಬ್ಬ ಸ್ತ್ರೀ ಇದ್ದರು. ನಮ್ಮನ್ನು ತಂದವರು ಆ ಸ್ತ್ರೀಯನ್ನು ಬೇರೆ ಕರೆದು, ಅವರಿಗೆ ಏನನ್ನೋ ಹೇಳಿ, ನನ್ನೆಡೆಗೆ ಬಂದು, 'ಅಮ್ಮಾ, ನಿರ್ಭಯೆಯಾಗು; ನಿನಗೆ ಇಲ್ಲಿ ಯಾವುದಕ್ಕೂ ಕೊರತೆಯಾಗದು. ನಾವು ಈಗ ಹೋಗಬೇಕು. ಎಲ್ಲವನ್ನೂ ಈ ತಾಯಿ ನೋಡಿಕೊಳ್ಳುವಳು,' ಎಂದು ನುಡಿದು ಹೋಗಿಬಿಟ್ಟರು. ಮುಂದೆ ಅರ್ಧ ಗಂಟೆಯಲ್ಲಿ ರತ್ನನಾಯಕಿ ಹುಟ್ಟಿದಳು. ನನ್ನ ಆರೈಕೆಮಾಡಿದವರ ಹೆಸರು 'ರತ್ನಮ್ಮ'ನೆಂದು. ಆದುದರಿಂದ ನನ್ನ ಮಗಳು ರತ್ನನಾಯಕಿ"

"ತಂಗೀ, ನಿಮ್ಮನ್ನು ಅಂದು ಬದುಕಿಸಿದವರು ನನ್ನ ಗುರುದೇವನು! ಅವರ ಜೊತೆಯಲ್ಲಿದ್ದ ಇಬ್ಬರಲ್ಲಿ ಒಬ್ಬನು ನಾನು. ಇನ್ನೊಬ್ಬನು ರತ್ನಮ್ಮನ ಮಗನು. ರತ್ನಮ್ಮನು ಗುರುದೇವನ ಅಕ್ಕ. ಕತ್ತಲೆಯಲ್ಲಿ ಬೀರನಾಯಕನು ನನ್ನನ್ನು ಗುರುತಿಸಲಿಲ್ಲ."

"ಅಣ್ಣಾ!" ಕಾಲಿಂದಿ ಕಾಲಿಂಗನ ಕಾಲ ಮೇಲೆ ಹಣೆಯಿಟ್ಟಳು.

"ಕಾಲಿಂಗಾ,!" ಬೀರನಾಯಕನು ಕಾಲಿಂಗನ ಕೊರಲಿಗೆ ತೆಕ್ಕೆ-ಗೂಡಿಸಿದನು.

---

## ೧೦

ಮರುದಿನ ಬೆಳಗಿನಲ್ಲಿ ಕಾಲಿಂಗನು ಹೊರಡುವ ಸಿದ್ಧತೆಯನ್ನು ಮಾಡತೊಡಗಿದನು.

"ಅಣ್ಣಾ, ಇಂದೊಂದು ದಿನ ಇದ್ದು ಹೋಗಬಾರದೆ?" ಕಾಲಿಂದಿ ಎಂದಳು.

"ಆಗದು, ತಾಯೀ. ಆಚೆನಾಡದು ಲಕ್ಷ್ಮಿಯು ಹುಟ್ಟಿದ ದಿನವು. ನನಗೂ ಮಕ್ಕಳಿಗೂ ಅಂದು ಹಬ್ಬವು. ನಾವೆಲ್ಲರೂ ಕೂಡಿ ಇರಬೇಕು.

ನೋಡು. ಅಲ್ಲವೇ, ಬೀರನಾಯಕಾ? ಕಾಲಿಂದಿ ತನ್ನ ಹುಟ್ಟಿದ ದಿನ ನಿನ್ನನ್ನು ಹೊರಗೆ ಬಿಡುವಳೆ?"

"ಅಂದು ನಾನು ಮನೆಯಲ್ಲಿ ಸೆರೆಯಾಳು. ಕಾಲಿಂಗಾ! ಹೊರಗಿನವರು ಯಾರಾದರೂ ಅಂದು ಬಂದಿದ್ದರೆ, ಹಬ್ಬವು ನನಗೋಸುಗವೊ ಇವಳಿಗೋಸುಗವೋ ಎಂಬುದು ಅವರಿಗೆ ಗೊತ್ತಾಗದು. ಹುಟ್ಟಿದ ದಿನವು ಹೆಸರಿಗೆ ಅವಳದು, ಹಬ್ಬವು ನಮ್ಮೆಲ್ಲರದು!"

" ಈ ಹೆಣ್ಣುಮಕ್ಕಳ ರೀತಿಯೆ ವಿಚಿತ್ರವಾಗಿರುತ್ತದೆ. ಅಮ್ಮಾ, ನಾನು ಇನ್ನು ಬರಲಾ?"

ನನ್ನ ಒಂದು ಮಾತನ್ನು ನಡೆಯಿಸುವೆಯಾ, ಅಣ್ಣಾ?"

"ಅದೇನು ತಾಯೀ?"

"ಅತ್ತಿಗೆಯ ಹುಟ್ಟಿದ ದಿನದ ಹಬ್ಬವು ಇಲ್ಲಿಯೆ ಆಗಲಿ, ಅಣ್ಣಾ. ಈ ಆನಂದವನ್ನು ನೀನು ನನಗೆ ಕೊಡಲಾರೆಯಾ? ಆ ಶುಭದ ದಿವಸ ಅತ್ತಿಗೆಯನ್ನು ಮೊದಲನೆಯ ಸಲ ಕಾಣುವ ಭಾಗ್ಯವನ್ನು ಒದಗಿಸು."

"ಈ ಮೊದಲೇ ನೀನು ಲಕ್ಷ್ಮಿಯನ್ನು ಕಂಡಿರುವೆ. ಮತ್ತು ಮೊದಲನೆಯ ಸಲ ನೀನು ಅವಳನ್ನು ಕಂಡುದಾದರೂ ಶುಭದಿನವೇ ಆಗಿತ್ತು. ರತ್ನನು ಹುಟ್ಟುವ ದಿವಸ ನಿನ್ನ ಆರಯ್ಕೆಗೆ ಬಂದವಳು ಲಕ್ಷ್ಮಿ—"

ಕಾಲಿಂದಿಯೂ ಬೀರನಾಯಕನೂ ಕಾಲಿಂಗನ ಮುಖದ ಕಡೆಗೆ ಆಶ್ಚರ್ಯದಿಂದಲೂ ಆದರದಿಂದಲೂ ನೋಡಿದರು. ಅವರ ಬಾಯಿಂದ ಮಾತುಗಳು ಹೊರಡಲಿಲ್ಲ. ಕೃತಜ್ಞತೆಯೆ, ನೀನು ಎಷ್ಟೊಂದು ಮಧುರವಾಗಿರುವೆ, ಎಷ್ಟೊಂದು ಪಾವನವಾಗಿರುವೆ!

"ಆದರೂ ನಿನ್ನ ಇಚ್ಛೆಯಂತೆ ಮಾಡುವೆನಮ್ಮಾ. ಆಚೆಯ ನಾಡದು ಮುಂಜಾವಿನಲ್ಲಿ ಅದಷ್ಟು ಬೇಗನೆ ನಾವೆಲ್ಲರೂ ಇಲ್ಲಿ ಬಂದಿರುವೆವು," ಎಂದು ನುಡಿದು ಕಾಲಿಂಗನು ಹೊರಡಲು ಸಿದ್ಧನಾದನು. ಕಾಲಿಂದಿಯೂ ಮಕ್ಕಳೂ ಆತನನ್ನು ನಮಸ್ಕರಿಸಿದರು. ಅವರನ್ನು ಹರಸಿ ಆತನು ಹೊರಟನು. ಬೀರನಾಯಕನು ಆತನನ್ನು ಕಳಿಸಲು ಹಳ್ಳದ ವರೆಗೆ ಹೋಗಿ ಬಂದನು.

ತನ್ನ ಹೆಂಡತಿ ಮಕ್ಕಳೊಡನೆ ಇನ್ನೆರಡು ದಿನಗಳಲ್ಲಿ ಕಾಲಿಂಗನು ಬರುವ

ನೆಂದು ಬೀರನಾಯಕನಲ್ಲಿ ಎಲ್ಲರಿಗೂ ಬಲು ಹಿಗ್ಗು. ಅವರು ಬಂದರೆ ತಮ್ಮ ಚಿಕ್ಕಗುಡಿಸಲು ಸಾಲದೆಂದು ಗುಡಿಸಲ ಮುಂದೆ ಹಂದರವನ್ನು ರಚಿಸಬೇಕೆಂದು ಬೀರನಾಯಕನೂ ಕಾಲಿಂದಿಯೂ ಗೊತ್ತುಮಾಡಿದರು. ಕೂಡಲೆ ಬೀರನಾಯಕನು ಹಂದರಕ್ಕೆ ಬೇಕಾಗುವ ಕಂಬ-ಕೋಲುಗಳನ್ನೂ ಹುಲ್ಲನ್ನೂ ತರಲು ಅಡವಿಗೆ ಹೋದನು. ಬೇಗನೆ ಊಟ ಕೆಲಸಗಳು ಮುಗಿದರೆ ಹಂದರದ ಕೆಲಸಕ್ಕೆ ಕೈಹಚ್ಚಲು ಅನುಕೂಲವಾಗುವುದೆಂದು ಕಾಲಿಂದಿ ಹಿರಿಯ ಮಗಳೊಡನೆ ಅಡಿಗೆಯನ್ನು ಪ್ರಾರಂಭಿಸಿದಳು. ಮಧ್ಯಾಹ್ನಕ್ಕೆ ಬೀರನಾಯಕನು ಮರಳಿ ಬಂದನು. ಅಡಿಗೆ ಆಗಿತ್ತು. ಅವನು ಜಳಕ ಮಾಡಿ ಮಕ್ಕಳೊಡನೆ ಊಟವನ್ನು ತೀರಿಸಿ ವಿಶ್ರಾಂತಿಗಾಗಿ ಅಡ್ಡಾದನು. ಕಾಲಿಂದಿಯೂ ಊಟಮಾಡಿ ಬೇಗಬೇಗನೆ ಅಡಿಗೆಮನೆಯ ಕೆಲಸಗಳನ್ನು ತೀರಿಸಿದಳು. ಬಳಿಕ ಎಲ್ಲರೂ ಕಲೆತು ಹಂದರವನ್ನು ಕಟ್ಟಲು ಆರಂಭಿಸಿದರು. ಸಂಜೆಯ ಹೊತ್ತಿಗೆ ಅರ್ಧ ಕೆಲಸವಾಯ್ತು. ಮರುದಿನ ಸಂಜೆಗೆ ದೊಡ್ಡ ಹಂದರವು ಸಿದ್ಧವಾಯ್ತು. ಆದರ ಮರುದಿನ ಉಡುಗುವುದೂ ಸಾರಿಸುವುದೂ ತಳಿರುತೋರಣಗಳನ್ನು ಕಟ್ಟುವುದೂ ಆಯ್ತು. ಎಲ್ಲರೂ ನೋಡಿದರು. ಹಂದರವು ಬಲು ಚಂದ ಕಾಣಿಸಿತು. "ರತ್ನನಾಯಕಿಯ ಮದುವೆಯ ಹಂದರವೂ ಇಷ್ಟು ಚೆಂದವಾಗಬೇಕು ನೋಡಿರಿ," ಎಂದು ಕಾಲಿಂದಿ ಎಂದಳು. ಕೂಡಲೆ, "ಅಕ್ಕನ ಮದುವೆ, ಅಕ್ಕನ ಮದುವೆ, ಹಾಲೂ ತುಪ್ಪದ ಕಾಲುವೆ!" ಎನ್ನುತ್ತ ರತ್ನನಾಯಕನು ತಮ್ಮನನ್ನು ಎತ್ತಿಕೊಂಡು ಕುಣಿಯತೊಡಗಿದನು. ಎಲ್ಲರಿಗೂ ಹರ್ಷವು.

——

೧೧

ಕಾಲಿಂಗನು ಇರುತ್ತಿದ್ದುದು ದೇವನಹಳ್ಳಿಯಲ್ಲಿ. ಆತನು ಬೀರನಾಯಕನಲ್ಲಿಂದ ಹೊರಟು ತನ್ನ ಊರಿಗೆ ಬರಬೇಕಾದರೆ ರಾತ್ರಿಯಾಯ್ತು. ಬಂದೊಡನೆ ಆತನು ಕಾಲಿಂದಿಯ ಔತಣವನ್ನೂ ತಾನು ಅದಕ್ಕೆ ಒಪ್ಪಿದುದನ್ನೂ ಹೆಂಡತಿಗೆ ತಿಳಿಸಿದನು. ಲಕ್ಷ್ಮಿಗೆ ಆನಂದವಾಯ್ತು. ಕಾಲಿಂದಿಯನ್ನು, ಕಾಲಿಂದಿಯ ಮಕ್ಕಳನ್ನು, ವಿಶೇಷತಃ ರತ್ನನಾಯಕನನ್ನು, ಕಾಣಬೇಕೆಂದು ಅವಳಿಗೆ ಕುತೂಹಲವು. ಎಷ್ಟೋಸಲ ತನ್ನ ಈ ಕುತೂಹಲವನ್ನು ಅವಳು

ಗಂಡನಿಗೆ ತಿಳಿಸಿದ್ದಳು. ಆದರೆ ಆತನು, "ಕಾಲವು ಬರಲಿ, ಹೋಗುವೆ ಯಂತೆ," ಎಂದು ಹೇಳುತ್ತಿದ್ದನು. ಈಗ ಆ ಕಾಲವು ಬಂದುದನ್ನು ಕಂಡು ಅವಳು ಬಲು ಸಂತೋಷಪಟ್ಟಳು.

ಮರುದಿನ ಅವರು ಪ್ರವಾಸದ ಸಿದ್ಧತೆಯನ್ನು ಮಾಡಿಕೊಂಡರು. ಆದರ ಮರುದಿನ ಇನ್ನೂ ರಾತ್ರಿ ಇರುವಾಗಲೆ ತಮ್ಮ ಇಬ್ಬರು ಮಕ್ಕಳೊಡನೆ ಬಂಡಿ ಯಲ್ಲಿ ಕುಳಿತು ಹೊರಟರು. ಅಂದು ಒಂಬತ್ತು ಹರದಾರಿ ದಾರಿ ನಡೆದು ಬಂಡಿ ರಾತ್ರಿಗೆ ರಾಮಪುರವೆಂಬ ಹಳ್ಳಿಗೆ ಬಂದಿತು. ಅವರು ಅಲ್ಲಿ ವಸ್ತಿ ಮಾಡಿ ಮರು ದಿನ ನಸುಕಿನಲ್ಲಿ ಹೊರಟು ಬಿಸಿಲು ಕಾಯುವ ಮೊದಲೆ ಬೀರನಾಯಕನ ಗುಡಿಸಲಿಗೆ ಬಂದರು.

ಎತ್ತುಗಳ ಕೊರಳ ಗಂಟೆಯ ಸಪ್ಪಳನ್ನು ಕೇಳಿ ಬೀರನಾಯಕನೂ ಕಾಲಿಂದಿಯೂ ತಮ್ಮ ಮಕ್ಕಳೊಡನೆ ಸ್ವಾಗತವೀಯಲು ಮೊದಲೆ ಹೊರಗೆ ಬಂದು ನಿಂತಿದ್ದರು. ಕಾಲಿಂಗನು ಬಂಡಿಯನ್ನು ತರುಬಿ ಕೆಳಗಿಳಿದನು. ಬಳಿಕ ಹರಿದಾಸನು ಇಳಿದು ಗೌರಿಯನ್ನು ಮತ್ತು ತಾಯಿಯನ್ನು ಇಳಿಸಿದನು. ಎಲ್ಲರ ಮುಖದ ಮೇಲೆ ಆನಂದವು ಒಡಮೂಡಿತು. ಲಕ್ಷ್ಮಿ ತನ್ನ ಕಾಲಿ ಗೆರಗಿದ ರತ್ನನಾಯಕಿಯನ್ನು ಹರಸಿ, ರಂಗನಾಯಕನನ್ನು ಎತ್ತಿಕೊಂಡು, ರಂಗನಾಯಕಿಯ ಬೆನ್ನಮೇಲೆ ಕೈಯಾಡಿಸಿ,"ನನ್ನ ರತ್ನ," ಎಂದು ರತ್ನ ನಾಯಕನ ಹೆಗಲಮೇಲೆ ಕೈಯಿಟ್ಟು ಕಣ್ತುಂಬಿ ಅವನನ್ನು ನೋಡಿ ಬಹು ಹರ್ಷಬಟ್ಟಳು. ಹರಿದಾಸನು ಮತ್ತು ಗೌರಿ ಬೀರನಾಯಕನಿಗೂ ಕಾಲಿಂದಿಗೂ ನಮಸ್ಕಾರ ಮಾಡಿ ಅವರ ಹರಕೆಯನ್ನು ಪಡೆದರು.

ಆವೊತ್ತಿನ ಹಬ್ಬವು ಬಿಟ್ಟಿಬೇಸರಿಕೆಯ ಅಥವಾ ಕಾಟಾಚಾರದ ಹಬ್ಬವಲ್ಲ, ಪ್ರೇಮಾಂಬುಧಿಯ ಉಕ್ಕು, ಸವಿನುಡಿಗಳ ಸೊಗಸು! ಪ್ರೇಮವೇ, ನೀನು ಎಷ್ಟು ಸವಿಯಾಗಿರುವೆ! ಬಡವರಾದರೆ ಅವರಲ್ಲಿ ಹಣವಿರಲಿಕ್ಕಿಲ್ಲ, ಆದರೆ ನೈಜಪ್ರೇಮಕ್ಕೆ ಕೊರತೆ ಇರದು. ಬಡವರು, ಬಡವರು ಕಲೆತಾಗ ಹೊರ-ಹೊಮ್ಮುವ ಪ್ರೇಮದ ಸವಿಯನ್ನು ಸುರರಾದರೂ ಬಲ್ಲರೆ ? ಬಲ್ಲವರಾಗಿದ್ದರೆ ಅಮೃತಕ್ಕೆ ಏಕೆ ಹಾಗೆ ಬಾಯ್ಬಿಡುತ್ತಿದ್ದರು.

ಊಟ ಕೆಲಸಗಳು ಆದ ಬಳಿಕ ಎಲ್ಲರು ಹಂದರದಲ್ಲಿ ಬಂದು ಮಾತ-ನಾಡುತ್ತ ಕುಳಿತರು. ಆಗ ಕಾಲಿಂದಿ ಎಂದಳು, "ಅತ್ತಿಗೆ, ರತ್ನನು ಹುಟ್ಟಿ-

ದಾಗ ನೀನು ಬಂದಿದ್ದೆ, ಮತ್ತು ಒಂದು ತಿಂಗಳವರೆಗೆ ಇದ್ದು ನನಗೆ ಆರೈಕೆ ಮಾಡಿದೆ. ಆಗ ನೀನು ಅತ್ತಿಗೆಯೆಂದು ನನಗೆ ಗೊತ್ತಾಗಲಿಲ್ಲವಲ್ಲ ?"

"ನಮ್ಮ ಸಂಬಂಧವು ಗೊತ್ತಾಗಕೂಡದೆಂದು ಇವರು ಹೇಳಿದ್ದರು. ಗಂಡನು ಹೇಳಿದುದನ್ನು ಹೆಂಡತಿ ಕೇಳಿಕೊಂಡು ಇರಬೇಕಲ್ಲವೆ ?" ಲಕ್ಷ್ಮಿ ಮುಗುಳ್ನಗೆಯಲ್ಲಿ ಉತ್ತರವಿತ್ತಳು.

"ಹಾಗೆ ನಾನು ಹೇಳಿದುದು ನಿಜವು, ಮತ್ತು ಅದಕ್ಕೆ ಕಾರಣವೂ ಇದ್ದಿತು. ಅದು ಇರಲಿ. ಲಕ್ಷ್ಮೀ, ನಿಜವಾಗಿಯೂ ಹೇಳು, ನೀನು ನನ್ನನ್ನು ನಿನ್ನ ಮುಷ್ಟಿಯಲ್ಲಿ ಇಟ್ಟುಕೊಂಡಿಲ್ಲವೆ? ಹೀಗಿರಲು, 'ಗಂಡನು ಹೇಳಿದುದನ್ನು ಹೆಂಡತಿ ಕೇಳಿಕೊಂಡು ಇರಬೇಕಲ್ಲವೆ ?' ಎಂದು ಏಕೆನ್ನುವೆ ?"

"ಅಬ್ಬಾ, ನಾನು ಇವರನ್ನು ನನ್ನ ಮುಷ್ಟಿಯಲ್ಲಿ ಇಟ್ಟುಕೊಂಡಿರುವೆನಂತೆ ! ಗಂಡನನ್ನು ಮುಷ್ಟಿಯಲ್ಲಿ ಇಟ್ಟುಕೊಳ್ಳಲು ಅಂತಹ ಯಾವ ಸಾಧನವು ಸ್ತ್ರೀಯರಲ್ಲಿ ಇರುವುದು ? ತಂಗೀ, ನೀನೇ ಹೇಳು, ನಾಯಕರು ನಿನ್ನ ಮುಷ್ಟಿಯಲ್ಲಿ ಇರುವರೇ ?"

"ನಾಯಕರು ಸಂಪೂರ್ಣವಾಗಿ ಸ್ವತಂತ್ರರು, ಅತ್ತಿಗೆ."

"ನಾನು ? ಸ್ವತಂತ್ರನು ? ಆಗ ಸ್ವತಂತ್ರನಾಗಿ ಏನು ಉಂಡೆನೆಂಬುದನ್ನು ಬಲ್ಲ ನಾನು, ಕಾಲಿಂದೀ, ಈಗಲೂ ಸ್ವತಂತ್ರನೇ? ನಾನು ನಿನ್ನ ತಂತ್ರದಲ್ಲಿ ಇರಲಿಲ್ಲವಾಗಿದ್ದರೆ, ಈ ಸುಖದ ದಿನಗಳನ್ನು ಕಾಣುತ್ತಿದ್ದೆನೆ? ಕಾಲಿಂದೀ, ನಾನು ಸರ್ವಥಾ ಸ್ವತಂತ್ರನಲ್ಲ, ನಿನ್ನ ತಂತ್ರದಲ್ಲಿ ಇರುವೆನು, ಮತ್ತು ಅದು ನನಗೆ ಕ್ಷೇಮವಾಗಿದೆ."

"ಬೀರನಾಯಕಾ, ಇವರಂತಹ ಸ್ತ್ರೀಯರ ತಂತ್ರವು ಸುತಂತ್ರವು. ತಮ್ಮ ಗಂಡಂದಿರನ್ನು ತಮ್ಮ ತಂತ್ರದಲ್ಲಿ ಇಟ್ಟುಕೊಳ್ಳಲು ಇವರಲ್ಲಿ ಒಂದು ವಿಲಕ್ಷಣ ಸಾಧನವಿದೆ. ಕೋಮಲವಾದರೂ ಅದು ಪ್ರಭಾವಿಯಾಗಿದೆ, ಅದು ಅದ್ಭುತವಾಗಿದೆ."

"ಅದಾವುದು, ಅಣ್ಣಾ ?"

"ನಿಮ್ಮ ತ್ಯಾಗವೃತ್ತಿ, ಪ್ರೇಮಪೂರ್ಣವಾದ ತ್ಯಾಗವೃತ್ತಿ !"

"ನೀವು ನಮ್ಮಲ್ಲಿ ಕಾಣುವ ಸಣ್ಣದೊಂದು ಗುಣವನ್ನು ಇಷ್ಟು ದೊಡ

ದಾಗಿ ನೋಡುವ ಉದಾರ ದೃಷ್ಟಿ ನಿಮ್ಮಲ್ಲಿ ಇರಲಿಲ್ಲವಾಗಿದ್ದರೆ, ಅಣ್ಣಾ ತ್ಯಾಗವೃತ್ತಿ ನಮ್ಮಲ್ಲಿ ಉಳಿಯುತ್ತಿದ್ದಿತೆ ?"

"ತಂಗೀ, ಲಕ್ಷ್ಮಿಯೂ ಮೊನ್ನೆ ಹೀಗೆಯೆ ಎಂದಳು. ನಿಮ್ಮ ಹೃದಯವು ಪವಿತ್ರವಾದುದು. ಧನ್ಯವು ನಿಮ್ಮ ಜೀವನವು !"

ಹಾ, ಜೋಕೆ, ಹರಿದಾಸಾ! ಈಗಾಗಲೆ ನಿನ್ನ ಉದಾರದೃಷ್ಟಿ ಯಾವ ತ್ಯಾಗವೃತ್ತಿಯನ್ನು ರತ್ನನಾಯಕಿಯಲ್ಲಿ ಕಂಡಿತು ? ರತ್ನನಾಯಕೀ, ಸರ್ವ ತ್ಯಾಗಕ್ಕೆ ನಿನ್ನ ಹೃದಯವು ಸಿದ್ಧವಿದೆಯೆಂಬುದನ್ನು ಹರಿದಾಸನಿಗೆ ಯಾವ ಮಾಯೆಯಿಂದ ಸೂಚಿಸಿದೆ? ಹರಿದಾಸಾ, ರತ್ನನಾಯಕೀ, ನಿಮ್ಮಿಬ್ಬರ ದೃಷ್ಟಿಗಳು ಹೀಗೆ ಕೂಡುತ್ತಿರುವುದನ್ನು ನಿಮ್ಮ ತಾಯಂದಿರು ಕಂಡಿಲ್ಲವೆಂದು ತಿಳಿದಿರುವಿರಾ ? ನಾಲ್ಕಾರು ಸಲವಾದರೂ ಅವರು ಕಂಡಿರುವರು ! ಹಾ, ಹೆದರಬೇಡಿರಿ; ನನ್ನ ಮುಂದೆ ಒಪ್ಪಿಕೊಂಡು ಬಿಡಿರಿ. ನಾನು ಎಲ್ಲವನ್ನೂ ಸರಿಪಡಿಸುವೆನು. ಒಪ್ಪಿಕೊಳ್ಳು, ರತ್ನನಾಯಕೀ, ಹೀಗೇಕೆ ನೋಡುತ್ತಿರುವೆ ಹರಿದಾಸನನ್ನು ? ಅವನ ಸಮ್ಮತಿಯನ್ನು ಪಡೆಯಲೋ ? ಅಗೋ, ಅವನ ಸಮ್ಮತಿ ! ನೋಡು ಆ ನಸುನಗೆಯನ್ನು. ಏನು, ನಿನ್ನ ಮುಖದಲ್ಲಿ ಆ ನಸುನಗೆಯ ಪ್ರತಿಬಿಂಬವೆ ? ಆಯ್ತು, ಇನ್ನಾದರೂ ಒಪ್ಪಿಕೊಳ್ಳು. ಗಟ್ಟಿಯಾಗಿ ಹೇಳಮ್ಮಾ! ತಾಯಂದಿರಿಗೆ ಕೇಳಿಸುವುದೆಂದು ಹೆದರಿಕೆಯೆ ? ಹಾಗಾದರೆ, ನನ್ನ ಕಿವಿಯಲ್ಲಿ ಹೇಳು. ಹಾ, ಸರಿಯಾಯ್ತು. ನೀನಯ್ಯಾ ? ಅಹುದು, ನೀನೂ ಒಪ್ಪಿಕೊಳ್ಳಬೇಕಯ್ಯಾ ! ನನ್ನ ಕಿವಿಯಲ್ಲಿಯೇ ? ಹಾಗೇ ಆಗಲಿ. ಸರಿ, ಸರಿ. ಇನ್ನು ಎಲ್ಲವೂ ಸರಿಯಾಗುವುದು, ನಿಮ್ಮ ತಾಯಂದಿರು ಈಗ ತಮ್ಮ ಹೃದಯದಲ್ಲಿ ಏನೆನ್ನುತ್ತಿರುವರು ನಿಮಗೆ ಹೇಳಲಾ? ಹಾ, ಹೇಳಬೇಕಂತೆ! ಹಾಗಾದರೆ ನಿಮ್ಮ ಮದುವೆಯಲ್ಲಿ ನನ್ನ ಬಾಯಿ ತುಂಬುವಂತೆ ನನಗೆ ಹಿಡಿ ಹಿಡಿ ಕೊಬ್ಬರಿ ಸಕ್ಕರೆಯನ್ನು ಕೊಡುವಿರಾ? ರತ್ನನಾಯಕೀ, ನೀನು ಹರಿದಾಸನ ಕೈಯಿಂದ ಕೊಡಿಸು, ಕೈಹಿಡಿದು ಕೊಡಿಸು. ಹರಿದಾಸಾ, ನೀನೂ ಹಾಗೆಯೆ ರತ್ನನಾಯಕಿಯ ಕೈಯಿಂದ ಕೊಡಿಸು. ಒಪ್ಪುವಿರಾ? ಸರಿ. ನೀವಿಬ್ಬರೂ ಕವಿಕುಲೋತ್ತಂಸನ ಶಾಕುಂತಲವನ್ನು ಓದಿರುವಿರಿ. ಐದನೆಯ ಅಂಕದ ಹದಿನೈದನೆಯ ಶ್ಲೋಕದ ಉತ್ತರಾರ್ಧವು, "समानयंस्तुल्यगुणं वधूवरं । चिरस्य वाच्यं

न गत: प्रजापति: ”॥ ಎಂದು ಇರುತ್ತದಲ್ಲವೆ ? ಇದನ್ನೇ ನಿಮ್ಮ ತಾಯಂದಿರ ಹೃದಯಗಳು ನುಡಿಯುತ್ತವೆ? ಗೊತ್ತಾಯ್ತೆ ನಿಮ್ಮ ತಾಯಂದಿರ ಹೃದ್ಗತವು? ನೀವು ಕೊಬ್ಬರಿ ಸಕ್ಕರೆಯ ವಚನವನ್ನು ಮರೆಯಬೇಡಿರಿ!

ಅದೇ ಕಾಲಕ್ಕೆ ಹೊರಗೆ ರತ್ನನಾಯಕನು,. “ಅಕ್ಕನ ಮದುವೆ, ಅಕ್ಕನ ಮದುವೆ, ಹಾಲೂ ತುಪ್ಪದ ಕಾಲುವೆ!” ಎಂದು ತನ್ನಷ್ಟಕ್ಕೆ ಹಾಡುತ್ತ ಕುಣಿಯಲಾರಂಭಿಸಿದ್ದನು. ಅದನ್ನು ಕೇಳಿ ಕಾಲಿಂಗನು ರತ್ನನಾಯಕಿಯ ಕಡೆಗೆ ನೋಡಿ, “ಇದೇನಮ್ಮಾ ರತ್ನನಾಯಕೀ, ತಮ್ಮನು ಏನನ್ನೋ ಹಾಡುತ್ತಿರುವನಲ್ಲ?” ಎಂದನು.

ರತ್ನನಾಯಕಿ ಮುಖವನ್ನು ತಗ್ಗಿಸಿದಳು. ಆಗ ಕಾಲಿಂದಿ ನಗುತ್ತ ಎಂದಳು, “ಈ ಹಂದರದಿಂದ ನಮ್ಮ ಬಾಲಕನಿಗೆ ಸ್ಫೂರ್ತಿ, ಇಷ್ಟೇ, ಅಣ್ಣಾ.”

ಕಾಲಿಂದಿ ಎಂದುದನ್ನು ಕೇಳಿ ಬೀರನಾಯಕನೆಂದನು, “ಹಾಗಲ್ಲ, ಕಾಲಿಂಗಾ; ಹಂದರದಿಂದ ಸ್ಫೂರ್ತಿ ಕಾಲಿಂದಿಗೆ, ಕಾಲಿಂದಿಯಿಂದ ಸ್ಫೂರ್ತಿ ರತ್ನನಾಯಕನಿಗೆ.”

“ಅದು ಹೇಗೆ?”

“ಹೀಗೆ. ನಿನ್ನೆ ಹಂದರವು ಸಿದ್ಧವಾದ ಬಳಿಕ, ನೋಡಿ ಕಾಲಿಂದಿ ಎಂದಳು, “ರತ್ನನಾಯಕಿಯ ಮದುವೆಯ ಹಂದರವೂ ಇಷ್ಟು ಚೆಂದವಾಗ ಬೇಕು ನೋಡಿರಿ,” ಎಂದು. ಆಕೆಯ ಈ ಮಾತಿನಿಂದ ರತ್ನನಿಗಾಯ್ತು ಸ್ಫೂರ್ತಿ. ಆಗಿನಿಂದ ಅತನು ಆಗಾಗ ಹೀಗೆ ಹಾಡುತ್ತ ಕುಣಿಯುತ್ತಿರುವನು.”

“ಹೀಗೋ? ನಾನು ತಿಳಿದೆನು ನೀವು ರತ್ನನಾಯಕಿಯ ಮದುವೆಯನ್ನು ಗೊತ್ತುಮಾಡಿರುವಿರೆಂದು”

“ನಿನಗೆ ಗೊತ್ತಾಗದಂತೆ ನಾವು ಗೊತ್ತುಮಾಡುವುದು ಹೇಗಯ್ಯಾ?”

“ಅಹುದು, ಅಣ್ಣಾ, ಗೊತ್ತುಮಾಡುವವನು ನೀನೇ ಅಲ್ಲವೆ?”

“ಅಹುದೇನಮ್ಮಾ, ರತ್ನನಾಯಕೀ? ಹಾಗಾದರೆ ಯಾರನ್ನು ಗೊತ್ತು ಮಾಡಲಿ?” ಹೀಗೆ ಕಾಲಿಂಗನು ಎನ್ನುತ್ತಿರುವಾಗ ರತ್ನನಾಯಕಿಗಾಗಲಿ ಹರಿದಾಸನಿಗಾಗಲಿ ತಾವು ಒಬ್ಬರೊಬ್ಬರ ಮುಖವನ್ನು ನೋಡುತ್ತಿದ್ದುದು ಗೊತ್ತೇ ಇರಲಿಲ್ಲ. ಅದನ್ನು ಕಂಡು ಕಾಲಿಂಗನು ಮುಗುಳ್ನಗೆಯಿಂದ ಎಂದನು,

"ನೋಡಿದೆಯಾ, ಕಾಲಿಂದೀ! ಇವರು, ಈ ಹರಿದಾಸ ರತ್ನನಾಯಕಿಯರು, ನನ್ನ ಪ್ರಮವನ್ನೇ ಉಳಿಸಿಬಿಟ್ಟಿರುವರು.!"

ಹರಿದಾಸನು ಮತ್ತು ರತ್ನನಾಯಕಿ ಮುಖವನ್ನು ತಗ್ಗಿಸಿದರು. ಆದರೆ ತಮ್ಮ ಹರ್ಷವನ್ನು ಮುಚ್ಚಿಕೊಳ್ಳುವುದು ಅವರಿಗೆ ಶಕ್ಯವಾಗಲಿಲ್ಲ. ಹೃದಯದ ಗುಟ್ಟನ್ನು ಅವರ ಎಳೆನಗೆ ಸಾರಿ ಹೇಳುತ್ತಿತ್ತು.

"ಅಣ್ಣಾ, ಅವರ ಇಚ್ಛೆ ಪೂರ್ಣವಾಗುವುದೊ?"

"ತಂಗೀ, ನಿನ್ನ ಮಾತಿನ ಹೊರಗೆ ನಾವು ಇಲ್ಲ. ಅಲ್ಲವೇ, ಲಕ್ಷ್ಮೀ?"

"ಭಾಗ್ಯದ ಲಕ್ಷ್ಮಿ ಮನೆಗೆ ಬರುತ್ತಿರುವಾಗ ಯಾರಿಗೆ ಆನಂದ ವಾಗದು?" ಲಕ್ಷ್ಮಿ ಹರ್ಷದಿಂದ ನುಡಿದಳು.

"ನಾವು ಧನ್ಯರಾದೆವು!" ಬೀರನಾಯಕನೂ ಕಾಲಿಂದಿಯೂ ಏಕಕಾಲ ದಲ್ಲಿ ನುಡಿದರು.

ಹೊರಗೆ, "ಅಕ್ಕನ ಮದುವೆ, ಅಕ್ಕನ ಮದುವೆ, ಹಾಲೂ ತುಪ್ಪದ ಕಾಲುವೆ," ಸಾಗಿಯೆ ಇತ್ತು. ರತ್ನನಾಯಕನು ತನ್ನ ಈ ಎರಡು ಸಾಲು ಗಳಿಗೆ ಇನ್ನೆರಡು ಸಾಲುಗಳನ್ನು ಕೂಡಿಸಿ ಪೂರ್ಣವಾದ ನುಡಿಯನ್ನು ಹೀಗೆ ಹೇಳಿದನು.—

> ಅಕ್ಕನ ಮದುವೆ, ಅಕ್ಕನ ಮದುವೆ,
> ಹಾಲೂ ತುಪ್ಪದ ಕಾಲುವೆ ||
> ಹೋಳಿಗೆ ಮಂಡಿಗೆ ಎಲ್ಲರಿಗೂವೆ,
> ನನಗೂ ತಂಗಿಗು ತಮ್ಮನಿಗೂವೆ! ||

ಕೇಳಿ ಎಲ್ಲರಿಗೂ ಹರ್ಷವು; ಹರ್ಷದಿಂದ ನಗೆ. ಹೀಗೆ ಅಂದಿನ ದಿನವು ಬಹು ಆನಂದದ ದಿನವಾಯ್ತು.

———

## ೧೨

ಮರುದಿನ ಮುಂಜಾವಿನಲ್ಲಿ ತನ್ನ ಗುಡಿಸಲ ಬಾಗಿಲ ಹೊರಗೆ ನಿಂತಿದ್ದ ಬೀರನಾಯಕನು ನಾಲ್ಕು ಜನರು ಬರುತ್ತಿರುವುದನ್ನು ನೋಡಿದನು. ಆ ನಾಲ್ವರಲ್ಲಿ ಮೂವರು ಗಂಡಸರು ಮತ್ತು ಒಬ್ಬಳು ಸ್ತ್ರೀ ತಂದೆ, ತಾಯಿ, ಮಗ ಮತ್ತು ಅವರ ಪರಿಚಯದವನು. ಸ್ತ್ರೀಯನ್ನು ತಾನು ಈ ಮೊದಲು

ಕಂಡಿರಬಹುದೆಂದು ಬೀರನಾಯಕನಿಗೆ ತೋಚಿತು. ಆದರೆ ಎಲ್ಲಿ ಮತ್ತು ಎಂದು ಎಂಬುದು ಅವನ ನೆನಪಿಗೆ ಬಾರದು. ಅವರೆಲ್ಲರು ಗುಡಿಸಲ ಬಳಿ ಬರುವಷ್ಟರಲ್ಲಿ ಕಾಲಿಂಗನು ಒಳಗಿನಿಂದ ಬಂದನು. ಅವರನ್ನು ನೋಡಿದೊಡನೆ ಆತನು ಓಡುತ್ತ ಹೋಗಿ ಗಂಡಹೆಂಡಿರ ಕಾಲಿಗೆ ಆದುದರಿಂದ ತಲೆಬಾಗಿ ಗುಡಿಸಲೊಳಗೆ ಕರೆಕೊಂಡು ಬಂದನು.

ಸ್ತ್ರೀ ಬೀರನಾಯಕನತ್ತ ನೋಡಿ ಎಂದಳು, "ನಾಯಕರೆ, ನನ್ನ ಪರಿಚಯವನ್ನು ನೀವು ಮರೆತಂತೆ ತೋರುತ್ತದೆ. ಎಂಟು ವರ್ಷಗಳ ಹಿಂದೆ ನಿಮ್ಮ ಮೂರನೆಯ ಮಗುವನ್ನು ತೊಟ್ಟಿಲಲ್ಲಿರಿಸುವ ದಿನ ಬಂದು ಮಗುವಿಗೆ ಹೆಸರಿಟ್ಟವಳು ನಾನೇ ಅಲ್ಲವೆ? ನಾನೇನೋ ಇಲ್ಲಿ ಎರಡೇ ದಿನ ಇದ್ದೆನು. ಆದುದರಿಂದ ನೀವು ನನ್ನನ್ನು ಮರೆತುದು ಸ್ವಾಭಾವಿಕವು. ಎಲ್ಲಿ ರಂಗನಾಯಕಿ?"

ಅಷ್ಟರಲ್ಲಿ ಎಲ್ಲರೂ ಹೊರಗೆ ಬಂದರು. ಬೀರನಾಯಕನು ರಂಗನಾಯಕಿಯನ್ನು ಮುಂದೆ ಕರೆದು, "ತಾಯೀ, ಇವಳೇ ರಂಗನಾಯಕಿ," ಎಂದು ಹೇಳಿದನು.

"ಬಾ, ನನ್ನ ಕಂದಮ್ಮಾ," ಎನ್ನುತ್ತ ಆ ಸ್ತ್ರೀ ರಂಗನಾಯಕಿಯ ತಲೆಯ ಮೇಲೆ ಮತ್ತು ಬೆನ್ನ ಮೇಲೆ ಕೈಯಾಡಿಸಿ, ಅರಳಿದ ಕಣ್ಣುಗಳಿಂದ ಅವಳನ್ನು ನೋಡುತ್ತ, "ದೊಡ್ಡವಳಾಗಿದ್ದಾಳೆ; ಮಗು ಸುಖವಾಗಿ ಬಾಳು!" ಎಂದು ಹರಸಿದಳು.

ಕಾಲಿಂದಿ ಆ ಸ್ತ್ರೀಯನ್ನು ಗುರುತಿಸಿ ನಮಸ್ಕರಿಸಿದಳು, ಮತ್ತು ಕಾಲಿಂಗನ ಸಂಜ್ಞೆಯನ್ನರಿತು ಆಕೆಯ ಪತಿಯನ್ನೂ ನಮಸ್ಕರಿಸಿದಳು. ಬಳಿಕ ಎಲ್ಲರೂ ನಮಸ್ಕರಿಸಿದರು. ಹೆಂಗಸರೂ ಹುಡುಗರೂ ಒಳಗೆ ಹೋದರು. ದೇವದತ್ತನು—ಅತಿಥಿಗಳ ಮಗ—ಮತ್ತು ಪರಿಚಯದವನು ಹರಿದಾಸನೊಡನೆ ಬೆಳೆದು ನಿಂತ ಹೊಲದ ಸೊಬಗನ್ನು ಸವಿಯಲು ಹೊರಗೆ ಹೋದರು.

ಬಳಿಕ ಅತಿಥಿ ಎಂದರು, "ಕಾಲಿಂಗಾ, ನೀನು ಹೇಳುತ್ತಿರುವಂತೆ ಗುಡ್ಡದ ಓರೆಯ ಈ ಸ್ಥಳವು ಬಹು ರಮ್ಯವಾಗಿದೆ ಈ ಹೊಲದಿಂದ ಅದರ

ರವ್ಯತೆ ಹೆಚ್ಚಿರುವುದು, ಮತ್ತು ಈ ಅಭೇದ್ಯವಾದ ಶಾಂತಿಯಿಂದ ಅದಕ್ಕೆ ಮಾಧುರ್ಯವು ಉಂಟಾಗಿರುವುದು. ದೇವದೇವನ ಔದಾರ್ಯದ ಸೌಭಾಗ್ಯ ವನ್ನು ನಮ್ಮ ಆಶ್ರಮದಲ್ಲಿ ಹೇಗೊ ಹಾಗೆ ಇಲ್ಲಿಯೂ ನಾವು ಸೇವಿಸ-ಬಹುದು. ಆದುದರಿಂದ ಗುರುದೇವನಿಗೆ ಇದೂ ಒಂದು ಪ್ರೀತ್ಯಾಸ್ಪದವಾದ ಸ್ಥಾನವಾಗಿರುವುದು, ಅಲ್ಲವೆ ?"

"ಅಹುದು, ಸ್ವಾಮಿ, ತಾವು ಎನ್ನುವುದು ನಿಜವು. ಸ್ವಾಭಾವಿಕ ವಾಗಿಯೆ ಸುಂದರವಾಗಿದ್ದ ಈ ಸ್ಥಳದ ಸೌಂದರ್ಯವು ಬೀರನಾಯಕನ ಪರಿಶ್ರಮದಿಂದ ಮತ್ತು ಕೌಶಲ್ಯದಿಂದ ಹೆಚ್ಚಿರುವುದು. ರತ್ನವನ್ನು ಚಿನ್ನದಲ್ಲಿ ಕೆಚ್ಚಿದರೆ ಹೇಗೊ ಹಾಗೆ ಆಗಿರುವುದು. ಇದು ಕಾಡು ಇತ್ತು. ಬೀರ-ನಾಯಕನು ಹನ್ನೆರಡು ವರ್ಷ ಇಲ್ಲಿ ಮನಮುಟ್ಟಿ ದುಡಿದು ಇದನ್ನು ಇಷ್ಟೊಂದು ಚೆಂದವಾಗಿ ಮಾಡಿರುವನು ನೀನು ಇಲ್ಲಿಗೆ ಬಂದು ಹನ್ನೆರಡು ವರ್ಷಗಳು ಆದುವು; ಅಲ್ಲವೇ, ಬೀರನಾಯಕಾ ?"

"ಅಹುದು, ಕಾಲಿಂಗಾ, ನೀನು ನಮ್ಮನ್ನು ಇಲ್ಲಿಗೆ ತಂದ ತರುವಾಯ ಒಂದು ವಾರದೊಳಗೆ ರತ್ನನು ಹುಟ್ಟಿದನು. ನಿನ್ನ ಯೋಜನೆಯಂತೆಯೆ ಅಲ್ಲವೆ ನಾವು ಇಲ್ಲಿ ಕೆಲಸ ಮಾಡಿದುದು ? ನಿನ್ನ ಉಪದೇಶವು, ನಿನ್ನ ಸಾಹಾಯ್ಯವು ನಿರಂತರ ದೊರೆತುದರಿಂದಲೆ ನಮಗೆ ಇಲ್ಲಿ ಇದ್ದು ಕೆಲಸ ಮಾಡಲು ಅನುಕೂಲ ವಾಯ್ತು. ಈ ಸ್ಥಳವು ಚೆಂದವಾದುದರ ಶ್ರೇಯಸ್ಸು ನಿನ್ನದು, ಕಾಲಿಂಗಾ."

"ಕಾಲಿಂಗನದು ಬಹು ಉಪಕಾರಿ ಜೀವನವು," ಅತಿಥಿ ಎಂದರು, "ಆತನದು ನಿಃಸ್ವಾರ್ಥ ಜೀವನವು. ಆತನು ಕರುಣಿ, ಉದಾರಚರಿತನು. ಆತನು ಕುಶಾಗ್ರಮತಿ. ನಿರ್ಮಲವು ಆತನ ಮನಸ್ಸು, ಪ್ರೇಮಮಯವು ಆತನ ಅಂತಃಕರಣವು, ಪವಿತ್ರವು ಆತನ ಹೃದಯವು. ಆದುದರಿಂದಲೆ ಆತ ನಲ್ಲಿ ಗುರುದೇವನಿಗೆ ಅಷ್ಟು ವಿಶ್ವಾಸವು. ಸನ್ಯಾಸಿಯ ಸಂಸಾರವು ಬಹು ವಿಸ್ತಾರವಾದುದು. ಸಂಸಾರಿಗಳ ಸಂಸಾರವು ಅವರವರ ಮನೆಗೆ ಪರಿಮಿತ ವಾಗಿರುತ್ತದೆ. ಆದರೆ ಸಂಸಾರದ ಬಂಧನಗಳನ್ನು ಹರಿದೊಗೆದ ಗುರುದೇವನಿಗೆ ವಸುಧೆಯೆ ಕುಟುಂಬವು. ಇಂತಹ ಗುರುದೇವನಿಗೆ ಬಲಗೈಯಾಗಿರುವ ಭಾಗ್ಯವು ಕಾಲಿಂಗನಿಗೆ ! ಕಾಲಿಂಗಾ, ನೀನು—"

" ನಾನು ಗುರುದೇವನ ಅಡಿಯ ಆಳು. "

" ಇಂತಹ ಗುರುದೇವನ ಅಡಿಯಾಳಾಗಿರುವವನ ತಂಗಿಯಾದ ನನ್ನ ಕಾಲಿಂದಿ ಧನ್ಯೆ !

" ಏನು, ಬೀರನಾಯಕಾ, ಕಾಲಿಂದಿ ಈತನ ಒಡಹುಟ್ಟಿದವಳೊ !"

" ಸ್ವಾಮೀ, ಮನ್ನಿಸಿದ ತಂಗಿಯಾಗಿದ್ದರೂ ಕಾಲಿಂದಿಯಲ್ಲಿ ಕಾಲಿಂಗನಿಗೆ ಒಡಹುಟ್ಟಿದ ತಂಗಿಯ ಪ್ರೇಮವು !"

" ಬೀರನಾಯಕಾ, ನಿನ್ನ ಹೆಂಡತಿಗೆ ಕಾಲಿಂಗನು ಹೇಗೆ ಅಣ್ಣನೋ, ಹಾಗೆಯೆ ನನ್ನ ಪದ್ಮನಾಭನಿಗೂ ದೇವದತ್ತನಿಗೂ ಸೋದರವಾವನಾಗಿರುವನು. ಪದ್ಮನಾಭನು ಬದುಕಿ ದೊಡ್ಡವನಾದುದು—"

" ಗುರುದೇವನ ಕೃಪೆಯಿಂದ !" ಕಾಲಿಂಗನು ಎಂದನು.

" ಅಹುದು, ಕಾಲಿಂಗಾ; ಆದರೆ ನೀನು ಅಂದು—"

" ಗುರುದೇವನು ನನ್ನ ಸಾಹಾಯ್ಯಕ್ಕೆ ಬರಲಿಲ್ಲವಾಗಿದ್ದರೆ—"

" ಸ್ವಾಮೀ, ಇದು ಇಪ್ಪತ್ತನಾಲ್ಕು ವರ್ಷಗಳ ಹಿಂದಿನ ಕಥೆಯಂತೆ ತೋರುತ್ತದೆ, " ಬೀರನಾಯಕನು ಅಧೀರನಾಗಿ ನುಡಿದನು.

" ಅಹುದು, ಬೀರನಾಯಕಾ, ಅಂದು—"

" ಅಂದು ಪಾತಕಿ ನಾನು—"

" ಹಿಂದಾದುದನ್ನು ನೆನೆದು ವ್ಯಥೆಪಡಬೇಡ, ಬೀರನಾಯಕಾ ! ಗುರುದೇವನ ಕೃಪೆಯಿಂದ ಎಲ್ಲವೂ ಕ್ಷೇಮವಾಗಿದೆಯಲ್ಲ ! ಅದೇ ಗುರುದೇವನ ಕೃಪೆಯಿಂದ ನೀನು ಒಡಹುಟ್ಟಿದವರಿಲ್ಲದ ನನಗೆ ತಮ್ಮನಾಗಿ ದೊರೆತೆ !"

" ಸ್ವಾಮೀ ನಿಮ್ಮ ಮಗನ ಶತ್ರುವಾದ ನನ್ನನ್ನು ನಿಮ್ಮ ತಮ್ಮನಾಗಿ—"

" ಭಾವಿಸುವಂತೆ ಮಾಡಿದ ಗುರುದೇವನ ಮಹಿಮೆಗೆ ಜಯಜಯಕಾರವು !"

ಬೀರನಾಯಕನು ರೋಮಾಂಚಿತನಾಗಿ ಕಂಬನಿಗರೆಯುತ್ತ ಶ್ರೀಪತಿರಾಯರ ಮುಂದೆ ಅಡ್ಡಬಿದ್ದನು. ಶ್ರೀಪತಿರಾಯರು ಪ್ರೇಮದಿಂದ ಅವನನ್ನು ಎಬ್ಬಿಸಿ ಬಿಗಿದಪ್ಪಿಕೊಂಡರು. ಹಠಾತ್ತಾಗಿ ಆಗ ಕಾಲಿಂದಿ ಅಲ್ಲಿಗೆ ಬಂದಳು

ತನ್ನ ಗಂಡನು ಅತಿಥಿಯ ಆಲಿಂಗನದಲ್ಲಿ, ಮತ್ತು ಕಾಲಿಂಗನ ಕಣ್ಣು ಗಳಿಂದ ಅಶ್ರುಧಾರೆ! ಕಾಲಿಂದಿಗೆ ಅರ್ಥವಾಗದು. ಆಶ್ಚರ್ಯಚಕಿತೆಯಾಗಿ ನಿಂತಳು. ಶ್ರೀಪತಿರಾಯರು ಎಂದರು, "ಅಮ್ಮ ಕಾಲಿಂದೀ, ನಾನು ಅಣ್ಣನೆಂಬುದು ಬೀರನಾಯಕನಿಗೆ ಗೊತ್ತಿರಲಿಲ್ಲ. ಈಗ ಅವನು ಅರಿತು ನನ್ನ ಆಲಿಂಗನದಲ್ಲಿರುವನು.''

"ಕಾಲಿಂದೀ, ಶತ್ರುವಾಗಿದ್ದ ನನ್ನನ್ನು ತಮ್ಮ ತಮ್ಮನಾಗಿ ಭಾವಿಸಿದ ಮಹಾನುಭಾವರಾದ ನನ್ನ ಅಣ್ಣನವರಿಗೆ ನಮಸ್ಕಾರ ಮಾಡು, ನಾನು ಕಪ್ಪು ತಂದ ಮಗು ಇವರ ಮಗನು, ಕಾಲಿಂದೀ!"

"ನನ್ನ ಪತಿಯನ್ನು ಕ್ಷಮಿಸಿದ ಮಹಾನುಭಾವರಾದ ನನ್ನ ಭಾವ-ನವರು!" ಕಾಲಿಂದಿಗೆ ಕಂಠವು ತುಂಬಿ ಬಂದಿತು. ಅವಳು ಶ್ರೀಪತಿರಾಯರ ಅಡಿಗಳ ಮೇಲೆ ಹಣೆಯಿಟ್ಟಳು. ಶ್ರೀಪತಿರಾಯರು ಅವಳ ತಲೆ ಬೆನ್ನುಗಳ ಮೈಲೆ ಕೈಯಾಡಿಸಿ, "ಮಗಳೇ, ಪತಿಯನ್ನು ಪ್ರೇಮದ ಬೆಳಕಿನಲ್ಲಿ ಸನ್ಮಾರ್ಗದಿಂದ ನಡೆಯಿಸಿದ ಸತಿ ನೀನು. ಧನ್ಯವು ನಿನ್ನ ಜೀವನವು!" ಎನ್ನುತ್ತ ಅವಳನ್ನು ಎಬ್ಬಿಸಿದರು.

ಕಾಲಿಂದಿ ಎಂದಳು:—"ನಮ್ಮನ್ನು ಕ್ಷಮಿಸಿದಿರಿ. ಇಷ್ಟೇ ಅಲ್ಲ, ನಮ್ಮ ಕಲ್ಯಾಣವನ್ನು ಚಿಂತಿಸುತ್ತಿರುವಿರಿ! ಅಕ್ಕತಂಗಿಯರಿಲ್ಲದ ನನಗೆ ರಂಗ-ನಾಯಕಿನೆ ಹೆಸರಿಡಲು ಪ್ರೇಮದ ಅಕ್ಕನನ್ನು ಒದಗಿಸಿದಿರಿ! ಏನು ಪುಣ್ಯವು ನಮ್ಮದು! ಯಾವ ಜನ್ಮದಲ್ಲಿ ಇಷ್ಟೊಂದು ಪುಣ್ಯವನ್ನು ಪರಮಾತ್ಮನು ನಮ್ಮಿಂದ ಮಾಡಿಸಿರಬಹುದು? ಪರಮಾತ್ಮನ ಮತ್ತು—"

"ನಮ್ಮೆಲ್ಲರನ್ನು ಬಂಧುಗಳಾಗಿ ಮಾಡಿದ ಗುರುದೇವನ ಕೃಪೆಯನ್ನು ಎಷ್ಟು ಕೊಂಡಾಡಿದರೂ ಸಾಲದು!" ಶ್ರೀಪತಿರಾಯರು ವಾಕ್ಯವನ್ನು ಮುಗಿಸಿದರು.

"ತಂಗೀ ಕಾಲಿಂದೀ ಇದು ಪಾವನ ಸಮಯವು," ಕಾಲಿಂಗನು ಎಂದನು, "ಎಲ್ಲರನ್ನು ಕರೆ, ಈ ಪುಣ್ಯಗಂಗೆಯ ಪ್ರವಾಹದಲ್ಲಿ ಸ್ನಾನ-ಮಾಡಲಿ,"

ಎಲ್ಲರೂ ಬಂದು ಪುಣ್ಯಗಂಗೆಯ ಪ್ರವಾಹದಲ್ಲಿ ಸ್ನಾನಮಾಡಿದರು.

---

೧೩

ಬೀರನಾಯಕನ ಹೊಲದಲ್ಲಿ ಗುಡ್ಡದ ಅಡಿಯುಗುಂಟ ಒಂದು ಹಳ್ಳವು ಇಂಪಾಗಿ ಹಾಡುತ್ತ ಹರಿಯುತ್ತಿದ್ದಿತು. ಮಾರ್ಗಶೀರ್ಷಮಾಸದಲ್ಲಿ ಹೊಲದಲ್ಲಿ ಬೆಳೆದು ನಿಂತಿರುವ ಆ ಜೋಳದ ಸೊಬಗು ಮನಸ್ಸನ್ನು ಸೆಳೆಯುತ್ತಿದ್ದಿತು. ಅಲ್ಲಿಯೆ ಒಂದೆಡೆಯಲ್ಲಿ ನಿಂಬೆಯ ನೂರಾರು ಗಿಡಗಳು. ತುಂಬೆ ಹಣ್ಣುಗಳು. ಏನು ಆ ಸೊಗಸು? ನಮ್ಮಲ್ಲಿ ಚೆಲುವೆಯರ ಮೈ-ಬಣ್ಣವನ್ನು ನಿಂಬೆಯ ಹಣ್ಣಿನ ಬಣ್ಣಕ್ಕೆ ಹೋಲಿಸಲು ಮೊದಲು ಮಾಡಿ-ದವನು ಎಷ್ಟೊಂದು ರಸಿಕನಾಗಿರಬಹುದು! ತುಂಬುಹಣ್ಣುಗಳ ಆ ಬಣ್ಣ, ಆ ಕಂಪು! ಎಲೆಗಳ ಹಚ್ಚಹಸಿರಲ್ಲಿ ಗಮಗಮಿಸುವ ಹಣ್ಣುಗಳ ಹೊಂಬಣ್ಣದ ಸೊಂಪನ್ನು, ಕವಿಯೆ ವರ್ಣಿಸುವುದಿದ್ದರೆ, ಚಿತ್ರಕಾರನೆ, ಚಿತ್ರಿಸುವುದಿದ್ದರೆ, ಸವಿಗಾರನೆ, ಸವಿವುದಿದ್ದರೆ ಬೀರನಾಯಕನ ಹೊಲದ ಜೋಳದ ಬೆಳೆಯ ಹಿನ್ನೆಲೆಯ ಈ ನಿಂಬೆಯ ಬನವನ್ನು ನಮ್ಮ ಈ ನಾಲ್ವರು ಸಾಧುಜೀವಿ-ಗಳೊಡನೆ ಕುಳಿತು ಕಣ್ತುಂಬೆ ನೋಡಿರಿ!

ಶ್ರೀಪತಿರಾಯರು, ಅವರ ಮಿತ್ರ ಸತ್ಯೇಂದ್ರನು ಮತ್ತು ಕಾಲಿಂಗನು ಬೀರನಾಯಕನೊಡನೆ ಇಳಿಹೊತ್ತಿನಲ್ಲಿ ಹಳ್ಳಕ್ಕೆ ಬಂದರು, ಮತ್ತು ದಂಡೆಯ ಮೇಲೆ ಕುಳಿತು ಬೀರನಾಯಕನ ಕೌಶಲ್ಯ-ಪೂರ್ಣವಾದ ಪರಿಶ್ರಮದ ದೃಶ್ಯರೂಪವನ್ನು ಕಂಡು ಆನಂದದಲ್ಲಿ ಕೆಲಹೊತ್ತು ಮೈಮ್ಮರೆತರು.

ಬಳಿಕ ಶ್ರೀಪತಿರಾಯರು ಎಂದರು, "ಬೀರನಾಯಕಾ, ಈ ನಮ್ಮ ಮಿತ್ರ ಸತ್ಯೇಂದ್ರನನ್ನು ಈ ಮೊದಲು ನೀನು ಕಂಡಿರುವೆಯಷ್ಟೇ?"

"ಇಲ್ಲ ಸ್ವಾಮಿ, ನಾನು ಕಂಡಿಲ್ಲ."

"ನೀನು ಕಂಡಿರುವೆ, ಆದರೆ ನಿನಗೆ ನೆನಪಿಲ್ಲ."

"ಅಹುದು, ಬೀರನಾಯಕಾ, ನೀನು ನನ್ನನ್ನು ಕಂಡಿರುವೆ," ಸತ್ಯೇಂದ್ರನು ಎಂದನು, "ನೀನು ಅಂದು ಸೇನಾಪತಿಯೊಡನೆ ಕಾಲಿಂಗನನ್ನು ಕಾಣಲು ಕಾಡಿಗೆ ಬಂದಿದ್ದೆ. ನಿಮ್ಮ ಜೊತೆಯಲ್ಲಿ ಇನ್ನೊಬ್ಬನಿದ್ದನಲ್ಲವೇ?"

"ಅಹುದು, ಇನ್ನೊಬ್ಬನಿದ್ದನು."

"ಅವನೇ ನಾನು."

"ಏನೆನ್ನುವಿರಿ? ಅವರೇ ನೀವೆಂದು ?"

"ಅಹುದು ಬೀರನಾಯಕಾ, ಅವನೇ ಇವನು. ನಮ್ಮ ಜೀವನದ ನಾಟಕದಲ್ಲಿ ಗುರುದೇವನು ಸೂತ್ರಧಾರರು, ಸತ್ಯೇಂದ್ರನು ಅವರ ಪಾರಿ-ಪಾರ್ಶ್ವಕನು. ಸತ್ಯೇಂದ್ರನು ಗುರುದೇವನ ಸೋದರಳಿಯನು, ರತ್ನಮ್ಮನ ಮಗನು. ರತ್ನಮ್ಮನನ್ನು ಬಲ್ಲೆಯಷ್ಟೇ?"

"ಸ್ವಾಮಿ, ಅವರನ್ನು ನಾನು ಮರೆವುದು ಹೇಗೆ? ನಮ್ಮ ಕಷ್ಟಗಳು ಅಳಿಯಲಾರಂಭಿಸಿದುದು ಅವರನ್ನು ಕಂಡ ಕ್ಷಣದಿಂದ. ನಾನು ಏಳು ಜನ್ಮ ಅವರ ಅಡಿಯಾಳಾಗಿ ಅವರ ಸೇವೆಮಾಡಿದರೂ ಅವರ ಉಪಕಾರವು ತೀರದು. ನಿಜವಾದ ಆನಂದವನ್ನು ನಾವು ಮೊದಲು ಅನುಭವಿಸಿದುದು ಆ ಮಹಾ ಸಾಧ್ವಿಯ ಮನೆಯಲ್ಲಿ!"

"ಅವರಂತೆ ಅವರ ಮಗನು. ಅಂದು ನಿನ್ನನ್ನು ಮತ್ತು ಕಾಲಿಂದಿಯನ್ನು ರತ್ನಮ್ಮನಲ್ಲಿಗೆ ತಂದ ಮೂವರಲ್ಲಿ ಇವನೊಬ್ಬನು. ಇನ್ನಿಬ್ಬರು ಯಾರೆಂಬು ದನ್ನು ನೀನು ಬಲ್ಲೆ."

"ಬಲ್ಲೆನು, ಸ್ವಾಮೀ. ಆ ಇಬ್ಬರು ಗುರುದೇವನು ಮತ್ತು ಕಾಲಿಂಗನು." ಆ ದಿನದ ಸಂಗತಿಗಳು ನೆನವಾಗಿ ಬೀರನಾಯಕನ ಕಣ್ಣುಗಳಿಂದ ಕೃತಜ್ಞತೆಯ ಹನಿಗಳು ಉದಿರಿದುವು.

"ಸತ್ಯೇಂದ್ರನು ಸೇನಾಪತಿಯ ವಿಶ್ವಾಸದಲ್ಲಿದ್ದವನು, ಸೇನಾಪತಿಯ ಪರಮ ಮಿತ್ರನು. ಇವನಿಗೆ ಸೇನಾಪತಿಯ ಸದ್ಗುಣಗಳು ಗೊತ್ತಿವೆ, ಅವರ ಕೊರತೆಗಳೂ ಗೊತ್ತಿವೆ. ಸೇನಾಪತಿಯಿಂದ ಆಗಬಹುದಾಗಿದ್ದ ಅನೇಕ ದುರ್ಘಟನೆಗಳು, ಪ್ರಮಾದಗಳು, ಇವನು ಸಕಾಲದಲ್ಲಿ ಮಿತ್ರಕಾರ್ಯವನ್ನು ಮಾಡಿದುದರಿಂದ ಆಗಲಿಲ್ಲ."

"ಸೇನಾಪತಿಯಲ್ಲಿ ಸದ್ಗುಣಗಳು! ಕೂಸನ್ನು ಕೊಲ್ಲಿಸಬೇಕೆಂಬವ-ನಲ್ಲಿ ಸದ್ಗುಣಗಳು!" ಬೀರನಾಯಕನು ವ್ಯಂಗ್ಯವಾಗಿ ನುಡಿದನು.

"ಅಹುದು, ಬೀರನಾಯಕಾ, ಇದರಲ್ಲಿ ಆಶ್ಚರ್ಯವೇನು? ನೀನೂ ಸಾಹಸಕ್ಕೆ ಎಳಸಿ ಕೂಸನ್ನು ಒಯ್ಯಲಿಲ್ಲವೆ? ಕೂಸನ್ನು ತರಿಸಿದ ಸೇನಾಪತಿ

ಮತ್ತು ಕೂಸನ್ನು ತಂದ ಬೀರನಾಯಕನು ಇಬ್ಬರೂ ಸಮಾನ ಅಪರಾಧಿಗಳು. ಆದರೆ ಈಗ ನೀನು ನನ್ನ ತಮ್ಮನಾಗಿರುವೆ ? ಏತರಿಂದ ? ನಿನ್ನ ಸದ್ಗುಣಗಳಿಂದ. ನಿನ್ನಲ್ಲಿ ಸದ್ಗುಣಗಳು ಇರಬಲ್ಲವಾದರೆ ಸೇನಾಪತಿಯಲ್ಲಿ ಏಕೆ ಇರಕೂಡದು ? ಜೀವವು ಮನುಷ್ಯನಾಗಿ ಬಂದುದು ತೇಜಸ್ವಿಯಾಗಿ ಬದುಕಲು, ಕೀಳಾಗಿ ಅಳಿಯಲು ಅಲ್ಲ. ತೇಜಸ್ವಿಯಾಗಿ ಬದುಕಲು ಅವಶ್ಯವಾಗಿರುವ ಎಲ್ಲ ಸದ್ಗುಣಗಳು ಮನುಷ್ಯನ ಹೃದಯದಲ್ಲಿ ಬೀಜರೂಪದಿಂದ ಇದ್ದೇ ಇರುತ್ತವೆ. ಅವುಗಳ ವಿಕಾಸವನ್ನು ತಡೆವ ಹಲಕೆಲವು ದೋಷಗಳು ಹೃದಯದಲ್ಲಿ ಇರುತ್ತಿರುವುದು ನಿಜ. ಆದರೆ ಸದ್ಗುಣಗಳ ಬೀಜಗಳು ಇರುವುದು ಸ್ವಾಭಾವಿಕವು, ದೋಷಗಳು ಆಗಂತುಕವಾದುವು. ಯಾವುದಾದರೂ ಕಾರಣದಿಂದ ದೋಷಗಳು ಪ್ರಬಲವಾಗಿ ಸದ್ಗುಣಗಳ ಪ್ರಭಾವವನ್ನು ಕೆಲವೊಂದು ಸಲ ಅಡಗಿಸಿದರೆ ಆಗ ಮನುಷ್ಯನ ಕೈಯಿಂದ ದುಷ್ಕೃತಿಗಳು ಘಟಿಸುವುವು. ಹೀಗೆ ಮನುಷ್ಯನು ದುಷ್ಟನಾಗುವನು. ಮನುಷ್ಯನು ಸ್ವಭಾವತಃ ದುಷ್ಟನಲ್ಲ, ಅವನು ಸ್ವಭಾವತಃ ಸಾಧು. ಕೆಲವೊಂದು ಕಾರಣದಿಂದ ಮಾಸಿದ ಚಿನ್ನವನ್ನು ತಿಪ್ಪೆಗೆ ಎಸೆಯಬಹುದೆ ? ಅದನ್ನು ಶುದ್ಧಗೊಳಿಸಲು ನಾವು ಯತ್ನಿಸುವುದಿಲ್ಲವೆ? ಹಾಗೆಯೆ ಸತ್ಯೇಂದ್ರನು ಸೇನಾಪತಿಯ ವಿಷಯದಲ್ಲಿ ಮಿತ್ರ ಕಾರ್ಯವನ್ನು ಮಾಡುತ್ತಿರುವನು ”

ಬೀರನಾಯಕನು ಶಾಂತಚಿತ್ತದಿಂದ ಕೇಳುತ್ತಿದ್ದನು. ತನ್ನ ಜೀವನವು ಹೊಸದೊಂದು ಪ್ರಕಾಶಕಿರಣವನ್ನು ಕಂಡಂತೆ ಅವನಿಗೆ ತೋರಿತು.

ಶ್ರೀಪತಿರಾಯರು ಸತ್ಯೇಂದ್ರನ ವಿಷಯದಲ್ಲಿ ಮುಂದೆ ಹೇಳತೊಡಗಿದರು:—

“ನಿನ್ನಿಂದ ಕೂಸನ್ನು ತರಿಸಿ, ಬೀರನಾಯಕಾ, ಕಾಲಿಂಗನಿಂದ ಅದನ್ನು ಕೊಲ್ಲಿಸಲು ಸೇನಾಪತಿ ಹೊಂಚಿದುದು ಸತ್ಯೇಂದ್ರನಿಗೆ ಹೇಗೋ ಗೊತ್ತಾಯ್ತು. ತರುವುದನ್ನು ತಪ್ಪಿಸಲು ಆತನಿಗೆ ಶಕ್ಯವಾಗಲಿಲ್ಲ. ಆದುದರಿಂದ ಕೊಲ್ಲುವುದನ್ನು ತಪ್ಪಿಸಲು ಆತನು ತತ್‌ಕ್ಷಣವೇ ಯೋಚಿಸಿದನು. ಗುರುದೇವನು ಸಮೀಪದಲ್ಲಿಯೆ ಇದ್ದುದು ಆತನಿಗೆ ಗೊತ್ತಿತ್ತು. ಕೂಡಲೆ ಗುರುದೇವನಿಗೆ ಸುದ್ದಿಯನ್ನು ಮುಟ್ಟಿಸಿದನು. ಮುಂದಿನ ಯೋಜನೆಯೆಲ್ಲವು ಗುರುದೇವನದು. ಹೀಗೆ ದುರ್ಘಟನೆ ತಪ್ಪಿತು.”

"ಸ್ವಾಮಿ, ತಮ್ಮ ಮಗನನ್ನು ಕೊಲ್ಲಿಸಬೇಕೆಂಬ ದುರ್ಬುದ್ಧಿ ಸೇನಾ-ಪತಿಗೆ ಆಗಲು ಕಾರಣವೇನು?" ಬೀರನಾಯಕನು ಕೇಳಿದನು.

"ಕಾರಣವು ಗುರುದೇವನು!"

"ಏನಿದು?"

"ಆಶ್ಚರ್ಯಪಡಬೇಕಾಗಿಲ್ಲ, ಬೀರನಾಯಕಾ. ಗುರುದೇವನು ನಮ್ಮ ಊರಲ್ಲಿಯ ಮಹಾಲಕ್ಷ್ಮಿಯ ಮಂದಿರಕ್ಕೆ ಬಂದು ದೇವಿಗೆ ಪ್ರದಕ್ಷಿಣೆ ಮಾಡುತ್ತಿದ್ದರು. ಆಗ ಅಲ್ಲಿಯೆ ಒಂದೆಡೆಯಲ್ಲಿ ಪದ್ಮಾವತಿ ಮಗು ಪದ್ಮನಾಭನನ್ನು ಆಡಿಸುತ್ತ ಕುಳಿತಿದ್ದಳು. ಪದ್ಮನಾಭನು ಗುರುದೇವನ ಲಕ್ಷ್ಯವನ್ನು ಸೆಳೆದನು. ಗುರುದೇವನು ಬಳಿಗೆ ಬಂದು, ಪ್ರೇಮದಿಂದಲೂ ಕುತೂಹಲದಿಂದಲೂ ಮಗುವನ್ನು ನೋಡಿ ಪದ್ಮಾವತಿಗೆ, 'ನೀನು ಭಾಗ್ಯವಂತಿ, ತಾಯೀ, ನಿನ್ನ ಮಗನು ಇಪ್ಪತ್ತುನಾಲ್ಕನೆಯ ವರ್ಷ ಅರಸುಮಗಳನ್ನು ಮದುವೆಯಾಗುವನಮ್ಮಾ!' ಎಂದು ಹೇಳಿ ಮಗುವಿನ ಮೈಯ ಮೇಲೆ ಕೈಯಾಡಿಸಿ ಪದ್ಮಾವತಿಯನ್ನು ಹರಸಿ ಮತ್ತೆ ಪ್ರದಕ್ಷಿಣೆಗೆ ಹೋದರು. ಗುರುದೇವನು ಪದ್ಮನಾಭನ ವಿಷಯದಲ್ಲಿ ಹೀಗೆ ನುಡಿದುದು ಮರುದಿನ ಸೇನಾಪತಿಯ ಕಿವಿಗೆ ಬಂದಿತು, ಮುಂದೆ ಏನಾಯ್ತೆಂಬುದನ್ನು ನೀನು ಬಲ್ಲೆ."

"ಗುರುದೇವನು ಹೇಗೆ ಕಾರಣವಾದರು?"

"ಗುರುದೇವನ ಭವಿಷ್ಯವಾಣಿ ಸೇನಾಪತಿಯನ್ನು ಕೆರಳಿಸಿತು."

"ಕಾರಣವೇನು?"

"ರಾಜನಿಷ್ಠ ಸೇನಾಪತಿಗೆ ಈ ಮಾತು ಅಸಹ್ಯವಾಯ್ತು.

"ಶುಭವಚನವು ಅಸಹ್ಯವಾಯ್ತೆ?"

"ಅಹುದು, ಬೀರನಾಯಕಾ. ಬಡವರೆಂದರೆ ಸೇನಾಪತಿಗೆ ತಿರಸ್ಕಾ-ರವು. ನಾನು ಬಡವನು. ಬಡವನ ಮಗನು ರಾಜಪುತ್ರಿಯ ಪತಿ! ತನ್ನ ರಾಜನಿಗೆ ಬಡವರೊಡನೆ ಸಂಬಂಧ! ಅನಾಹುತವು! ಈ ಅನಾಹುತವನ್ನು ತಪ್ಪಿಸಲು ಒಂದೇ ಉಪಾಯವು. ನನ್ನ ಮಗನು ಇಲ್ಲದಂತಾಗುವುದು!"

"ಸೇನಾಪತಿಗೆ ಈ ಯೋಜನೆಯಲ್ಲಿ ನಾನು ಸಹಕಾರಿಯಾದೆನಲ್ಲವೆ? ಯಾವುದನ್ನೂ ವಿಚಾರಿಸದೆ ಪಾಪಕ್ಕೆ ಕೈಹಾಕಿದೆನಲ್ಲವೆ? ನಾನು ಮಹಾಪರಾಧಿ! ದೇವನ ರಾಜ್ಯದಲ್ಲಿ ನನಗೆ ಕ್ಷಮೆ ಎಂತು?"

" ಕೈಮೀರಿ ಹೋದುದನ್ನು ಕುರಿತು ವ್ಯಥೆಪಡುವುದು ಇನ್ನು ಸಾಕು, ಬೀರನಾಯಕಾ! ಗುರುದೇವನ ಪ್ರಭಾವದಿಂದ ಎಲ್ಲವೂ ಒಳಿತಾಗಿರುವುದಷ್ಟೇ. ಇಷ್ಟು ಕಾಲ ನಾವೆಲ್ಲರು ಅಜ್ಞಾತವಾಸದಲ್ಲಿ ಇದ್ದುದು ಗುರುದೇವನ ಯೋಜನೆ. ಗ್ರಹಣವು ಬಹುಶಃ ಬಿಟ್ಟಿದೆ ಇನ್ನು ಸ್ವಲ್ಪ ಅವಧಿಯ ಅನಂತರ ನಾವು ಗ್ರಹಣಮುಕ್ತರಾಗುವೆವು. ಗುರುದೇವನ ಅಜ್ಞೆಯಿಂದ ಇಂದು ನಾವು ಇಲ್ಲಿಗೆ ಬಂದಿರುವೆವು. ಇನ್ನು ಹತ್ತು-ಹನ್ನೆರಡು ದಿನಗಳಲ್ಲಿ ಅವರೇ ಇಲ್ಲಿಗೆ ಬರುವರು. ಕಾಲಿಂಗ, ಸತ್ಯೇಂದ್ರ ಮತ್ತು ದೇವದತ್ತ ಆಶ್ರಮಕ್ಕೆ ಹೋಗಬೇಕು. ನಾಳೆ ನಸುಕಿನಲ್ಲಿ ಅವರು ಹೊರಡಬೇಕು ಮುಂದಿನ ಯೋಜನೆಯನ್ನು ನಾನು ಅರಿಯೆನು."

" ಗುರುದೇವನ ಭವಿಷ್ಯವಾಣಿ ? "

" ಗುರುದೇವನ ಸಾಮರ್ಥ್ಯದಲ್ಲಿ ನಮಗೆ ಅವಿಶ್ವಾಸವು ಬೇಡ."

" ಜಯ, ಗುರುದೇವ ! " ಎಲ್ಲರೂ ಏಕಕಂಠದಿಂದ ನುಡಿದರು.

ಹುಣ್ಣಿಮೆಯ ಚಂದ್ರಮನು ಪೂರ್ಣ ವೈಭವದಿಂದ ಉದಯಿಸಿದನು.

---

## ೧೪

ವಿಜಯಪುರದ ಅರಮನೆಯಲ್ಲಿ ರಾಜನೂ ರಾಜನಿಷ್ಠ ಸೇನಾಪತಿಯೂ ಮಾತನಾಡುತ್ತ ಕುಳಿತಿರುವರು.

ರಾಜನೆಂದನು, "ಸೇನಾಪತಿ, ರಾಜಲಕ್ಷ್ಮಿಗೆ ವಯಸ್ಸು ಎಷ್ಟೆಂಬುದು ನಿಮ್ಮ ಲಕ್ಷ್ಯದಲ್ಲಿ ಇದೆಯೆ ? "

" ಹೋದ ಕಾರ್ತಿಕಕ್ಕೆ ರಾಜಪುತ್ರಿಗೆ ಹತ್ತೊಂಬತ್ತು ವರ್ಷಗಳು ತುಂಬಿದುವು, ಮಹಾಸ್ವಾಮಿ."

" ನನ್ನ ಪ್ರಶ್ನೆಯ ಉದ್ದೇಶವನ್ನು ಅರಿತಿರಾ ? "

" ಅರಿತಿದ್ದೇನೆ, ಮಹಾಸ್ವಾಮಿ. "

" ರಾಜಲಕ್ಷ್ಮಿ ನಿಮ್ಮನ್ನು ಚಿಕ್ಕ ತಂದೆಯೆಂದು ಭಾವಿಸಿಲ್ಲವೆ ? "

" ಈ ಭಾಗ್ಯವು ನನ್ನದಿದೆ ಎಂಬುದನ್ನು ನಾನು ಅರಿಯದೆ ಇಲ್ಲ, ಮಹಾಸ್ವಾಮಿ. "

"ಹೀಗಿರಲು, ಅವಳಿಗಾಗಿ ವರನನ್ನು ಶೋಧಿಸಿರೆಂದು ನನ್ನಿಂದ ನಿಮಗೆ ಸೂಚನೆ ಬೇಕಿಲ್ಲವಷ್ಟೇ? ಅವಳ ತಾಯಿ ಬದುಕಿದ್ದರೆ, ಈ ಮೊದಲೆ ನಿಮಗೆ ಅವಳಿಂದ ಸೂಚನೆ ಬರುತ್ತಿತ್ತು, ಸೇನಾಪತೀ."

"ಮಹಾಸ್ವಾಮಿ," ಸಗದ್ಗದ ಕಂಠದಿಂದ ಸೇನಾಪತಿ ನುಡಿದನು, "ರಾಜಪುತ್ರಿಯ ವಿಷಯದಲ್ಲಿ ನಾನು ನನ್ನ ಕರ್ತವ್ಯವನ್ನು ಮಾಡುತ್ತಿಲ್ಲವೆಂದು ತಾವು ಭಾವಿಸಬಾರದಾಗಿ ಬೇಡಿಕೊಳ್ಳುತ್ತೇನೆ."

"ಹಾಗಾದರೆ, ಈಗಾಗಲೆ ನೀವು ಏನು ಮಾಡಿರುವಿರೆಂಬುದನ್ನು ನಾನು ತಿಳಿಯಬಹುದೆ?"

"ಎಲ್ಲ ರಾಜಕುಲಗಳ ಸವಿಸ್ತರ ವೃತ್ತಾಂತವನ್ನು ರಾಜಪುತ್ರಿ ನನ್ನಿಂದ ಅರಿತಿರುವರು."

"ಆಕೆಯ ಅಭಿಪ್ರಾಯವು?"

"ತಾನು ಒಪ್ಪಬಹುದಾದ ರಾಜಪುತ್ರನು ಒಬ್ಬನೂ ಇಲ್ಲವೆಂದು."

"ಅದು ಹೇಗೆ?"

"ಕೆಲವರು ದುರ್ಬಲರು, ಕೆಲವರು ಕುರೂಪಿಗಳು, ಕೆಲವರಿಗೆ ಸ್ವಾಸ್ಥ್ಯವಿಲ್ಲ, ಕೆಲವರಿಗೆ ಮನೋದಾರ್ಢ್ಯವಿಲ್ಲ, ಕೆಲವರು ಚಂಚಲಚಿತ್ತರು, ಕೆಲವರು ಸ್ವಾರ್ಥಪರರು, ಕೆಲವರು ಅಸೂಯಿಗಳು, ಕೆಲವರು ಅಸಹಿಷ್ಣುಗಳು, ಕೆಲವರು ಮಂದಬುದ್ಧಿಗಳು, ಕೆಲವರು ವಿಷಯಲೋಲರು, ಕೆಲವರು ಸ್ವೈರವೃತ್ತಿಗಳು, ಕೆಲವರು ನೀತಿಬಾಹ್ಯರು, ಕೆಲವರು ಕೃಪಣರು, ಕೆಲವರು ಲೋಭಿಗಳು."

"ಮುಂದೆ?"

"ಪ್ರಜಾಪಾಲನತತ್ಪರರಾದ ಹಲವು ರಾಜರನ್ನು ಸೂಚಿಸಿದೆನು. ಆದರೆ ಅವರು ವಿವಾಹಿತರು."

"ರಾಜಲಕ್ಷ್ಮಿ ಏನೆಂದಳು?"

"'ವಿಜಯಚಂದ್ರ ಮಹಾರಾಜರ ಮಗಳು ಸವತಿಯೆನಿಸಿಕೊಳ್ಳಲು ಒಪ್ಪಳು,' ಎಂದರು."

"ಹಾಗಾದರೆ, ರಾಜಕುಲಗಳನ್ನು ಬಿಟ್ಟು ಬೇರೆಡೆಯಲ್ಲಿ ಶೋಧಿಸಬೇಕು."

"ಫಲವೇನು, ಮಹಾಸ್ವಾಮಿ?"

" ರಾಜಪುತ್ರಿಗೆ ಇಷ್ಟವಾದ ಗುಣಗಳುಳ್ಳವನು ದೊರೆಯಬಹುದು. "

" ದೊರೆವುದು ಅಸಂಭವವಲ್ಲ. "

" ದೊರೆವಂತಿದ್ದರೆ ಶೋಧಿಸಬಹುದಲ್ಲವೇ ? "

" ಆದರೆ ಅಲ್ಲಿ ಸಂಪತ್ತು ಇರುವದಿಲ್ಲವಲ್ಲ ? "

" ಯಾವ ಸಂಪತ್ತು, ಸೇನಾಪತೀ ? "

" ಧನದ ಸಂಪತ್ತು, ಅಧಿಕಾರದ ಸಂಪತ್ತು, ಮಹಾಸ್ವಾಮಿ. "

" ನೀವು ಈಗ ಶೋಧಿಸಿರುವ ರಾಜಕುಲದವರಲ್ಲಿ ಈ ಎರಡೂ ಸಂಪತ್ತುಗಳು ಉಂಟು. ಆದರೂ ನನ್ನ ಮಗಳು ತಿರಸ್ಕರಿಸಿದಳಲ್ಲವೆ ? ಸೇನಾಪತೀ, ರಾಜಲಕ್ಷ್ಮಿ ಸಂಪತ್ತಿನ ಶತ್ರುವಲ್ಲ. ಅವಳಿಗೆ ಇಷ್ಟವಾದುದು ಗುಣಸಂಪತ್ತು. ಈ ಸಂಪತ್ತುಳ್ಳವನು ಬಡವರ ಮನೆಯವನಾಗಿದ್ದರೆ ಆತನು ನನ್ನ ಮಗಳಿಗೆ ಇಷ್ಟನಲ್ಲವೆಂದು ನೀವು ತಿಳಿವಿರೇನು ? "

" ಆದರೆ ದರಿದ್ರನ ಈ ಸಂಪತ್ತಿಗೆ ಜಗತ್ತು ಬೆಲೆಗೊಡುವುದಿಲ್ಲ ! "

" ಇರಬಹುದು ಆದರೆ ಜಗತ್ತು ಬಾಳಿದ್ದುದು ಗುಣವಂತರ ಗುಣಸಂಪತ್ತಿನಿಂದ, ಸೇನಾಪತೀ ! ಜಗತ್ತನ್ನು ಬಾಳಿಸಿದ ಗುಣಸಂಪತ್ತನ್ನು ತಿರಸ್ಕರಿಸುವುದು ಕೃತಘ್ನತೆಯಲ್ಲವೆ ? "

" ಮಹಾಸ್ವಾಮಿ, ತಾವು ನನಗೆ ಹೊಸ ಬೆಳಕನ್ನು ಕೊಡುತ್ತಿರುವಿರಿ! "

" ಸೇನಾಪತೀ, ನೀವು ನನ್ನನ್ನು ಮೆಚ್ಚಿಸಿರುವುದು ನಿಮ್ಮ ನಿಷ್ಠೆಯಿಂದ, ನಿಮ್ಮ ತ್ಯಾಗದಿಂದ. ಅಮೂಲ್ಯವಾದ ಗುಣಗಳಿವು. ನಿಮ್ಮಲ್ಲಿ ಒಂದು ದೋಷವನ್ನು—ಅದು ಮಹಾದೋಷವು ! — ನಾನು ಕಂಡಿದ್ದರೂ ನಿಮ್ಮ ವಿಷಯದಲ್ಲಿ ನನಗೆ ಪ್ರೀತಿ, ಆದರವು ಕಡಿಮೆಯಾಗಿಲ್ಲ ದರಿದ್ರರು ದರಿದ್ರರು ಎನ್ನುತ್ತ ಬಡವರನ್ನು ಹಳಿಯುತ್ತೀರಿ; ಅವರ ಏಳ್ಗೆಗೆ, ಅವರ ಉತ್ಕರ್ಷಕ್ಕೆ ಆಸ್ಪದವನ್ನು ಕೊಡದೆ ಆತಂಕಗಳನ್ನು ಒಡ್ಡುತ್ತೀರಿ. ಇಂದಿಲ್ಲ ನಾಳೆ ನೀವು ಈ ದೋಷದಿಂದ ಮುಕ್ತರಾಗುವಿರೆಂದು ನಂಬಿ ನಿಮ್ಮ ನಿಷ್ಠೆಗೆ ಮೆಚ್ಚಿದ ನಾನು ಈ ವಿಷಯದಲ್ಲಿ ಮೌನವನ್ನು ತಳೆದಿದ್ದೆನು. ನಿಮ್ಮ ನಿಷ್ಠೆ ಅದ್ಭುತವಾಗಿರುವುದು. ಆದರೆ ರಾಜನು ಶ್ರೀಮಂತರ ಪ್ರತಿನಿಧಿಯಾಗಿರುವಂತೆ ಬಡವರ ಪ್ರತಿನಿಧಿಯೂ ಆಗಿರುವನು. ಇಷ್ಟೇ ಅಲ್ಲ, ಬಹುಸಂಖ್ಯಾಕರಾದ ಬಡವರು

ಆತನ ಪ್ರಾಣವು. ಬಡವರ ಏಳ್ಗೆಗೆ ವಿಘ್ನಗಳನ್ನು ಒಡ್ಡುವವರು, ಅವರನ್ನು ತಿರಸ್ಕರಿಸುವವರು ಆತನ ಪ್ರಾಣಕ್ಕೆ ಆಘಾತಗಳನ್ನು ಒದಗಿಸುವರು. ಈ ಮಾತು ನಿಮ್ಮ ಲಕ್ಷ್ಯದಲ್ಲಿ ಇಲ್ಲ. ನಿಮ್ಮ ದೋಷವನ್ನು ನಿಮಗೆ ತೋರಿಸಲು ಇಂದು ನನಗೆ ಸಮಯವು ಬಂದಿತು. ನಿಷ್ಠಾವಂತನಾದ, ಮಹಾತ್ಯಾಗಿಯಾದ ನನ್ನ ಸೇನಾಪತಿ ಸರ್ವಥಾ ಗುಣಧನನಾಗಿರಲೆಂಬ ನನ್ನ ಹಂಬಲವು ಇಂದು ನನ್ನನ್ನು ಈ ಬಗೆಯಾಗಿ ನುಡಿಯಿಸಿತು. ಸೇನಾಪತೀ, ನಿಮ್ಮ ಮನಸ್ಸನ್ನು ನಾನು ನೋಯಿಸಿಲ್ಲವಷ್ಟೇ ?"

"ನನ್ನ ಅಪರಾಧವನ್ನು ಕ್ಷಮಿಸಿದ ನನ್ನ ಪ್ರಭು, ನನಗೆ ಬೆಳಕನ್ನು ಕೊಟ್ಟ ನನ್ನ ಗುರು !" ಎನ್ನುತ್ತ ವಿನೀತನಾಗಿ ಸೇನಾಪತಿ ಕೈಮುಗಿದನು.

ಅರಸು ಮುಂದುವರಿದನು, "ಸೇನಾಪತೀ, ಗುಣಸಂಪತ್ತು ಮಾನವನಿಗೆ ಕ್ಷೇಮವಾಗಿಸುವ ಧನ್ವಂತರಿ, ಕತ್ತಲೆಯಲ್ಲಿ ದಾರಿತೋರಿಸುವ ದಿವ್ಯಚಕ್ಷು, ದೇವದೇವನ ಪಾದಕ್ಕೆ ಕೈಹಿಡಿದೊಯ್ಯುವ ಪರಮಗುರು ! ಉಳಿದ ಸಂಪತ್ತು ಇದ್ದರೇನು, ಬಿದ್ದು ಹೋದರೇನು ? ಗುಣಸಂಪತ್ತಿಗೆ—ಈ ದೈವೀಸಂಪತ್ತಿಗೆ ಎಲ್ಲರೂ, ಬಡವರಿರಲಿ, ಸಿರಿವಂತರಿರಲಿ, ಅಧಿಕಾರಿಗಳು. ಈ ಅಧಿಕಾರವೇ ಅಧಿಕಾರವು, ಉಳಿದುದು ಅಂಧಕಾರವು ! ಸಿರಿವಂತಿಕೆಯ ದರ್ಪದಿಂದ ಬಡವರನ್ನು ತಿರಸ್ಕರಿಸುತ್ತ ಅವರನ್ನು ತುಳಿಯುತ್ತ ಹೋಗುವುದರಲ್ಲಿ ಪುರುಷಾರ್ಥವಿಲ್ಲ, ಅಧಃಪಾತವಿದೆ !"

"ನನ್ನ ಪ್ರಭು, ನನ್ನ ಗುರು ! ಇನ್ನೊಂದು ಅಪರಾಧವನ್ನು, ಮಹಾಪರಾಧವನ್ನು, ಈಗ ಒಪ್ಪಿಕೊಳ್ಳಲು ನನಗೆ ಅನುಜ್ಞೆ ದೊರೆಯಬೇಕು."

"ಸೇನಾಪತೀ, ಅದು ನನಗೆ ಗೊತ್ತಾಗಿದೆ, ಮೊನ್ನೆ ರಾಜಲಕ್ಷ್ಮಿಯ ಹುಟ್ಟು-ಹಬ್ಬದ ದಿನವೇ ಗೊತ್ತಾಗಿದೆ !"

"ಗೊತ್ತಾದರೂ ಪ್ರಭುವಿಗೆ ನನ್ನಲ್ಲಿ ಈ ಬಗೆಯ ಪ್ರೇಮವೇ ? ಕ್ಷಮಾನಿಧೀ" ಸೇನಾಪತಿಯು ಕಂಠವು ತುಂಬಿ ಬಂದಿತು, ಅವನ ಕಣ್ಣುಗಳಿಂದ ಕೃತಜ್ಞತೆ ಧಾರೆಯಾಗಿ ಹರಿಯಿತು. ಕೆಲಹೊತ್ತು ಮೌನವಾಗಿದ್ದು ಮತ್ತೆ ಅವನೆಂದನು, "ಮಹಾಸ್ವಾಮಿ, ಹೇಗೆ ಗೊತ್ತಾಯ್ತೆಂಬುದನ್ನು ನಾನು ತಿಳಿಯಬಹುದೆ ?"

"ಸಕಾಲದಲ್ಲಿ ಎಲ್ಲವೂ ಗೊತ್ತಾಗುವುದು," ರಾಜನು ಮಾರ್ನುಡಿದನು.

ಆ ಹೊತ್ತಿಗೆ ದ್ವಾರಪಾಲಕನು ಬಂದು, "ಗಡಿನಾಡಿನಿಂದ ಒಬ್ಬ ದೂತನು ಬಂದಿರುವನು, ಅವನು ಮಹಾರಾಜರನ್ನು ಕಾಣಲು ಬಯಸು-ವನು,'' ಎಂದನು.

" ಅವನನ್ನು ಒಳಗೆ ಕಳುಹಿಸು,'' ರಾಜನು ಹೇಳಿದನು.

ದೂತನು ಒಳಗೆ ಬಂದು ನಮಸ್ಕರಿಸಿ ರಾಜನ ಮುಂದೆ ಒಂದು ಪತ್ರ ವನ್ನು ಇಟ್ಟನು. ರಾಜನು ಅದನ್ನು ಓದಿ ಸೇನಾಪತಿಗೆ ಅದನ್ನು ಓದಲು ಕೊಟ್ಟನು. ಸೇನಾಪತಿ ಓದಿದ ಬಳಿಕ ರಾಜನೆಂದನು :--

" ಸೇನಾಪತೀ, ರುದ್ರನಾಯಕನು ಇನ್ನೂ ತನ್ನ ತುಂಟತನವನ್ನು ಬಿಡಲೊಲ್ಲನು! ನಮ್ಮ ಕ್ಷಮೆಯನ್ನು ವಿಪರೀತವಾಗಿ ಭಾವಿಸುತ್ತಿರುವನು. ನಮ್ಮ ಕ್ಷಮೆ ನಮ್ಮ ದೌರ್ಬಲ್ಯದ ಲಕ್ಷಣವೆಂದು ಅವನ ಭಾವನೆಯಾದಂತೆ ತೋರುತ್ತದೆ. 'ತಪ್ಪಾಯ್ತು, ಕ್ಷಮಿಸಬೇಕು,' ಎಂದು ಕಳೆದ ವರ್ಷ ಅವನು ಕೇಳಿಕೊಂಡುದು ಮೂರನೆಯ ಸಲ. ನಾವು ಕ್ಷಮಿಸಿದೆವು. ಈಗ ಮತ್ತೆ ಅವನು ಉಪಟಳವನ್ನು ಆರಂಭಿಸಿದ್ದಾನೆ. ಬೇಕಾದಷ್ಟು ಧನವು ಅವನಲ್ಲಿ ಇದೆ. ಆದರೂ ಧನದಾಸೆ ಅವನನ್ನು ಬಿಡಲೊಲ್ಲದು. ನಿರುಪದ್ರವಿ ಗಳನ್ನು ಈ ಬಗೆಯಾಗಿ ಪೀಡಿಸಿ ಸುಲಿದು ಹಣ ಕೂಡಿಸಿ ಏನು ಮಾಡು ವನೋ? ಏಕೆ ಈ ಪಾಪಸಂಚಯವು? ಮಕ್ಕಳಂದಿಗನು ಅವನು; ಲೋಕ ಪೀಡನೆಗೆ ಅವನ ಮನಸ್ಸು ಎಳಸುವುದು ಹೇಗೆ? ತಾನು ನಿರ್ವ್ಯಸನಿ; ಆದರೆ ವ್ಯಸನಾಧೀನರಿಗೆ ಕೈಬಿಟ್ಟು ಹಣ ಕೊಟ್ಟು ಅವರನ್ನು ಸುಲಿಗೆಯ ಕೆಲಸದಲ್ಲಿ ಉಪಯೋಗಿಸಿಕೊಂಡು ಅವರ ವ್ಯಸನಾಸಕ್ತಿಯನ್ನು ಹೆಚ್ಚಿಸುತ್ತಿರುವನಲ್ಲ! ಅವನು ಬಲಶಾಲಿ; ಆದರೆ ಅವನ ಬಲವು ನಿರುಪದ್ರವಿಗಳ ಛಲನೆಗೆ ಉಪ ಯೋಗಿಸಲ್ಪಡುತ್ತಿದೆ! ಅವನ ಉಪದ್ರವಕ್ಕೆ ಜನರು ಜರ್ಜರರಾಗಿದ್ದಾರೆ. ಸೇನಾಪತೀ, ಅವನ ಉನ್ಮಾದವನ್ನು ಕುಗ್ಗಿಸಲು ಉಪಾಯವನ್ನು ಕೈಕೊಳ್ಳುವಿರಾ? ನಿರರ್ಥಕವಾಗಿ ರಕ್ತಪಾತವಾಗದಂತೆ ನೋಡಿಕೊಳ್ಳಿರಿ. ಬೇಗನೆ ಕಾರ್ಯವನ್ನು ಸಾಧಿಸಿರಿ. ಅವಶ್ಯವಿದ್ದಷ್ಟೇ ಸೈನ್ಯದೊಡನೆ ಹೊರ ಡಿರಿ."

" ಮಹಾರಾಜರ ಅಪ್ಪಣೆ, " ಎಂದು ನಮಸ್ಕಾರಮಾಡಿ ಸೇನಾಪತಿ ಅರಮನೆಯಿಂದ ಹೊರಹೊರಟನು.

---

೧೫

ರಾತ್ರಿಯ ಮೊದಲನೆಯ ಪ್ರಹರವು. ಚಂದ್ರೋದಯವಾಗಿತ್ತು. ಆಶ್ರಮವಾಸಿಗಳು ಉಪಾಸನೆಗೋಸುಗ ನೆರೆದವರು ಉಪಾಸನೆಮುಗಿದಿದ್ದರೂ ತಮ್ಮ ತಮ್ಮ ಸ್ಥಳಕ್ಕೆ ಮರಳಿ ಹೋಗಿರಲಿಲ್ಲ. ವಾತಾವರಣವು ಗಂಭೀರ ವಾಗಿತ್ತು. ಐವತ್ತು ಆರವತ್ತು ಜನರು ನೆರೆದಿದ್ದರು. ಎಲ್ಲರು ನಿಃಶಬ್ದರಾಗಿ ಗುರುದೇವನತ್ತ ದೃಷ್ಟಿಯಿಟ್ಟು ಕುಳಿತಿದ್ದರು. ಬಯಲಲ್ಲಿ ಚಳಿ ವಿಪರೀತ-ವಾಗಿತ್ತು. ಆದರೂ ಆ ಚಳಿಯನ್ನು ಲೆಕ್ಕಿಸದೆ ಗುರುದೇವನ ಮುಖದಿಂದ ಹೊರಡಬಹುದಾದ ಮಾತುಗಳನ್ನು ಕೇಳಲು ಅವರು ಉತ್ಸುಕರಾಗಿ ಕುಳಿ-ತಿದ್ದರು. ಗುರುದೇವನು ಗಂಭೀರವಾಗಿ ನುಡಿದರು :—

" ರುದ್ರನಾಯಕನ ಉಪದ್ರವದಿಂದ ಜನರು ಹೌಹಾರಿ ಹೋಗಿರು ವರು. ಅವರಿಗೆ ಧೈರ್ಯವೀಯಲು ಮತ್ತು ಅವರಲ್ಲಿ ಆತ್ಮಶಕ್ತಿಯನ್ನು ಕೆರ ಳಿಸಲು ಹೋದ ಪದ್ಮನಾಭನ ಸುದ್ದಿ ಇಂದು ಈ ವರೆಗೂ ಇಲ್ಲ. ಆತನು ಹೋಗಿ ಒಂದು ವಾರವಾಯ್ತು. ನಿನ್ನಿನ ವರೆಗೆ ಪ್ರತಿದಿನವೂ ಸುದ್ದಿ ಬರು ತ್ತಿತ್ತು. ಇಂದು ಬಾರದಿರಲು ಕಾರಣವೇನು ? ಆತನು ರುದ್ರನಾಯಕನ ಕೈಯಲ್ಲಿ ಸಿಕ್ಕಿದನೊ ? ಅಥವಾ ಸುದ್ದಿಯನ್ನು ತರುವವನಿಗೇನಾದರೂ ಅಪಾಯವು ಸಂಭವಿಸಿತೋ ? ಏನೇ ಆಗಿರಲಿ, ನಾವು ಉದ್ವಿಗ್ನರಾಗ ಕೂಡದು. ಈ ಸಲದ ನಮ್ಮ ಪ್ರಯತ್ನವು ಪೂರ್ಣವಾಗಿ ಯಶಸ್ವಿಯಾಗಲೇ ಬೇಕು, ಉದ್ವೇಗಕ್ಕೆ ನಾವು ಎಡೆಯಿತ್ತರೆ ನಮ್ಮಿಂದ ಅಚಾತುರ್ಯವು ಘಟಿಸಬಹುದು. ಜನಸೇವೆಗೆ ನಿಮ್ಮ ಜೀವನವನ್ನು ಮುಡುಪಾಗಿ ಇಟ್ಟಿದ್ದೀರಿ. ಕಾರ್ಯಕ್ಷಮವಾದ ದೇಹಶಕ್ತಿಯನ್ನೂ ಮನೋದಾರ್ಢ್ಯವನ್ನೂ ಸಂಪಾದಿ ಸಿರುವಿರಿ. ಕರ್ತವ್ಯನಿಷ್ಠೆ ಮತ್ತು ಕಾರ್ಯಕುಶಲತೆ ನಿಮ್ಮಲ್ಲಿ ಇದೆ. ಹೋರಾ ಟಕ್ಕೆ ಸಿದ್ಧರಾಗಿರಿ. ಧೀರನೂ ಬುದ್ಧಿಶಾಲಿಯೂ ಆದ ಪದ್ಮನಾಭನು ನಿಮಗೆ ನಾಯಕನಿರುವಾಗ ಈ ಸಲದ ಪ್ರಯತ್ನವು ಸಫಲವಾಗುವುದೆಂಬುದರಲ್ಲಿ

ಸಂದೇಹವು ಬೇಡ. ಉತ್ಸಾಹವಿರಲಿ, ಉದ್ವೇಗವು ಬೇಡ. ಉದ್ವೇಗದಿಂದ ಮನುಷ್ಯನು ವಿಕಾರವಶನಾಗಿ ಕರ್ತವ್ಯಜ್ಞಾನವನ್ನು ಕಳೆದುಕೊಂಡು ಅಂಗೀಕೃತ ಕಾರ್ಯದಲ್ಲಿ ಅಯಶಸ್ವಿಯಾಗುವನು. ನೀವೆಲ್ಲರೂ ಧೀರನಾಯಕನ ಧೀರ ಅನುಯಾಯಿಗಳಾಗಿ ಹೋರಾಡಿ ಜನರ ಆಪತ್ತನ್ನು ನೀಗಿಸಿರಿ. ಪದ್ಮನಾಭನು ಒಂದು ವೇಳೆ ರುದ್ರನಾಯಕನ ಜನರ ಕೈಗೆ ಸಿಕ್ಕಿದ್ದರೂ ಆತನ ಜೀವಕ್ಕೆ ಅಪಾಯವಿಲ್ಲ. ಸೆರೆಯಲ್ಲಿಯೂ ಆತನು ಪ್ರಭಾವಶಾಲಿಯಾಗಿರುವನು. ಆಶ್ರಮದಲ್ಲಿ ಹತ್ತು ಜನರು ಇರಲಿ. ಉಳಿದವರು ನಾಳೆಯೇ ಹೊರಡಲಿ. ಇಲ್ಲಿ ಇರತಕ್ಕವರು ಯಾರೆಂಬುದನ್ನು ಕಾಲಿಂಗನು ನಿರ್ಧರಿಸುವನು. ನಸುಕಿನಲ್ಲಿ ಸತ್ಯೇಂದ್ರನ ನಾಯಕತ್ವದಲ್ಲಿ ಹೊರಡಿರಿ ನಾನೂ ಕಾಲಿಂಗನೂ ನಾಳೆ ಮಧ್ಯಾಹ್ನದ ವರೆಗೆ ಇಲ್ಲಿ ಇದ್ದು ಏನು ಸುದ್ದಿ ಬರುವುದೋ ನೋಡಿ ಮುಂದಿನ ಯೋಜನೆಯನ್ನು ಯೋಜಿಸುವೆವು. ಇನ್ನು ಮೂರು ದಿನಗಳಲ್ಲಿ ರುದ್ರನಾಯಕನ ಬಲವು ಮುರಿಯಲೇಬೇಕು. ರಾಜಧಾನಿಯಿಂದ ಸೇನಾಪತಿ ಸೈನ್ಯದೊಡನೆ ಹೊರಟಿರಬಹುದು. ರಾಜಸೈನ್ಯಕ್ಕೆ ರುದ್ರನಾಯಕನ ಜನರನ್ನು ಇದಿರಿಸುವ ಪ್ರಸಂಗವೇ ಬರಲಾಗದು. ರಕ್ತಪಾತವನ್ನು ತಪ್ಪಿಸಬೇಕು. ಇನ್ನು ಪರಮಾತ್ಮನ ಸಾಹಾಯ್ಯವನ್ನು ಪ್ರಾರ್ಥಿಸಿ ಏಳುವ."

ಪ್ರಾರ್ಥನೆ ಮುಗಿದ ಬಳಿಕ ನೆರೆದವರು ತಮ್ಮ ತಮ್ಮ ಸ್ಥಳಕ್ಕೆ ಹೋದರು. ಗುರುದೇವನು ಕಾಲಿಂಗ ಸತ್ಯೇಂದ್ರರೊಡನೆ ಮುಂದಿನ ಯೋಜನೆಯ ಆಲೋಚನೆಗಾಗಿ ತಮ್ಮ ಕೋಣೆಗೆ ಬಂದರು. ಗುರುದೇವನು ಎಂದರು.

"ರುದ್ರನಾಯಕನು ತನ್ನ ಜನರು ನಡೆಯಿಸಿರುವ ಹಿಂಸಾಕೃತಿಗಳಿಂದ ಇನ್ನೂ ಉನ್ಮತ್ತನಾಗಿರುವನು. ಹಿಂಸೆಗೆ ಗುರಿಯಾದವರು ದಿಕ್ಕುಗಾಣದೆ ಮನೆ-ಮಾರುಗಳನ್ನು ತೊರೆದು ಓಡಿಹೋಗುತ್ತಿರುವರು. ಓಡಲು ಆರಂಭಿಸಿದವರು ಧನವಂತರು. ಅವರು ಓಡುವುದನ್ನು ನೋಡಿ ಉಳಿದವರು ಧೈರ್ಯಗೆಟ್ಟರು. ತಮ್ಮನ್ನು ಅಡ್ಡಗಟ್ಟಿದವರಿಗೆ ಹಣಕೊಟ್ಟು ಧನವಂತರು ಜೀವ ಉಳಿಸಿಕೊಳ್ಳುವರು. ಆದರೆ ಹಣವಿಲ್ಲದುದರಿಂದ ಬಡವರು ಸಾಯುತ್ತಿರುವರು. ಐವತ್ತರವತ್ತು ಸ್ವಾರ್ಥಿಗಳ ನೆರವಿನಿಂದ ಎಷ್ಟೊಂದು ಅನಾಹುತವನ್ನು ರುದ್ರನಾಯಕನು ನಡೆಸಿರುವನಲ್ಲ! ಪೀಡಕರ ಸಂಖ್ಯೆ ಅಲ್ಪ

ವಾಗಿರುತ್ತದೆ. ಪೀಡೆಗೆ ಗುರಿಯಾದವರು ಬಹು ಸಂಖ್ಯರು. ಬಹುಸಂಖ್ಯೆ! ಹೇಡಿಗಳ ಬಹುಸಂಖ್ಯೆ! ಇವರ ಹೇಡಿತನವು ಉಪದ್ರವಿಗಳ ಉನ್ಮಾದವನ್ನು ಹೆಚ್ಚಿಸಿರುವುದು. ತಮ್ಮಲ್ಲಿಯೂ ದುರ್ದಮ್ಯವಾದ ಶಕ್ತಿಯಿದೆಂಬುದನ್ನು ಜನರು ಅರಿವುದೆಂದು? ಆದರೆ ಜೀವಕ್ಕೆ ಅಂಟಿಕೊಳ್ಳುವವರಿಗೆ ವಿಚಾರಶಕ್ತಿ ಇದ್ದರಲ್ಲವೆ? ಹೆಂಡಿರುಮಕ್ಕಳನ್ನು ಬಿಟ್ಟು ಓಡಿಹೋಗಲು ನಾಚದ ಗಂಡುಸರಲ್ಲಿ ಪ್ರತಿರೋಧಕಶಕ್ತಿಯನ್ನು ಎಚ್ಚರಿಸಲು ನಾವು ಯತ್ನಿಸುತ್ತಿದ್ದೇವೆ! ಪದ್ಮನಾಭನಂತಹ ರತ್ನವನ್ನು ನಾನು ಪಣಕ್ಕೆ ಹಚ್ಚಿದ್ದೇನೆ. ದೇವದೇವಾ, ನಿನ್ನ ರತ್ನದ ಬೆಲೆ ನಿನಗೆ ಇದೆ! ಇನ್ನು ರಾಜಸೈನ್ಯವು ಬರುವುದು. ಸೈನ್ಯ, ಯುದ್ಧ, ರಕ್ತಪಾತ! ಹರಿವ ರಕ್ತವು ಮತ್ತೂ ಬಡವರದೇ! ತಮ್ಮ ಬಡತನ ಕ್ಕೋಸುಗ ಸಾಯಬೇಕು ಬಡವರು, ಮತ್ತೆ ಸಿರಿವಂತರ ಆಢ್ಯತೆಗೋಸುಗ ಸಾಯಬೇಕು ಬಡವರು! ಅನ್ಯಾಯಕ್ಕೆ ಗುರಿಯಾಗಿ ಸಾಯಬೇಕು ಬಡ ವರು, ಮತ್ತು ಅನ್ಯಾಯವನ್ನು ಪ್ರತಿರೋಧಿಸುತ್ತ ಸಾಯಬೇಕು ಬಡವರು! ಬಡವರ ಸಾವನ್ನು ತಡೆಯಲು ಸಿದ್ಧನಾಗಬೇಕಲ್ಲವೆ ಪದ್ಮನಾಭನಂತಹ ಪುರುಷಸಿಂಹನು ತನ್ನ ಜೀವವನ್ನು ಹುಲ್ಲಿಗೆ ಬಗೆಯಲು?—"

ಬಾಗಿಲನ್ನು ತಟ್ಟಿದ ಶಬ್ದವಾಯ್ತು. "ಒಳಗೆ ಬರಬಹುದು," ಗುರು ದೇವನು ನುಡಿದರು. ಬಾಗಿಲನ್ನು ತೆರೆದು ಬಂದವನಿಗೆ ಗುರುದೇವನು ಎಂದರು, "ಏನು ಶಿವನಾಥಾ, ಇಂದು ರಾತ್ರಿಯಾಯ್ತಲ್ಲ? ಪದ್ಮನಾಭನು ಕ್ಷೇಮವಷ್ಟೇ?"

"ಪದ್ಮನಾಭನು ಕ್ಷೇಮದಿಂದ ಇರುವರು, ಭಗವನ್. ಇಂದು ರುದ್ರ ನಾಯಕನ ಜನರನ್ನು ತಪ್ಪಿಸಲು ಸುತ್ತುಹಾಯ್ದು ಬರಬೇಕಾಯ್ತು."

"ಏನು ಸುದ್ದಿ?"

"ಜನರಲ್ಲಿ ಧೈರ್ಯವು ಬರುತ್ತಿದೆ. ಅವರಿಗೆ ತಮ್ಮ ಶಕ್ತಿಯ ಅರಿವು ಆಗುತ್ತಲಿದೆ. ಧೈರ್ಯಗುಂದುವುದರಿಂದ ತಮಗೆ ಹಾನಿ ಹೆಚ್ಚುತ್ತದೆಂಬು ದನ್ನು ಅವರು ತಿಳಿಯತೊಡಗಿರುವರು. ಪದ್ಮನಾಭನಲ್ಲಿ ಅವರ ವಿಶ್ವಾಸವು ದೃಢವಾಗುತ್ತಿದೆ. ಪದ್ಮನಾಭನಂತಹ ನಾಯಕನು ತಮಗೆ ದೊರೆತುದು ಪರ ಮೇಶ್ವರನ ಕೃಪೆಯೆಂದು ಅವರು ಭಾವಿಸುತ್ತಿರುವರು. ಅನೇಕರು ಎಂತಹ

ಪ್ರಸಂಗ ಬಂದರೂ ಅವರನ್ನು ಹಿಂಬಾಲಿಸಲು ಪ್ರತಿಜ್ಞೆಗೈದಿರುವರು. ರುದ್ರ ನಾಯಕನ ಜನರಲ್ಲಿ ಬಿಗುವು ಕಡಿಮೆಯಾಗಿದೆ. ಈ ವರೆಗೆ ನಮ್ಮ ಅಪೇಕ್ಷೆ ಯಂತೆ ಎಷ್ಟೋ ಕಾರ್ಯವಾಗಿದೆ. ಆದರೆ—"

"ಆದರೆ ಏನು, ಶಿವನಾಥ ?"

"ಜನರಲ್ಲಿಯೆ ಕೆಲವು ಕಿಡಿಗೇಡಿಗಳು ತಲೆದೋರಿದ್ದಾರೆ. ತಾವು ಜನರ ಪಕ್ಷದವರೆಂದು ಹೇಳುತ್ತ ಸ್ವಾರ್ಥಸಾಧನೆಗಾಗಿ ಅವರು ಅಯೋಗ್ಯಕೃತ್ಯ ಗಳನ್ನು ಮಾಡತೊಡಗಿದ್ದಾರೆ. ರುದ್ರನಾಯಕನ ಪಕ್ಷದವರು ಬಲವುಳ್ಳವ ರಾಗಿದ್ದಾಗ ಇವರು ತಲೆಮರೆಯಿಸಿಕೊಂಡಿದ್ದರು. ಈಗ ಅವರ ಬಲವು ಕಡಿಮೆ ಯಾದುದನ್ನು ಕಂಡು ಇವರು ತಾವೇ ಜನರ ನಾಯಕರಾಗಲು ಹವಣಿಸು ತ್ತಿರುವರು. ರುದ್ರನಾಯಕನ ಪಕ್ಷವನ್ನು ತೊರೆದ ಹಲವರೂ ಇವರನ್ನು ಕೂಡಿರುವರು. ಇವರೆಲ್ಲರು ರುದ್ರನಾಯಕನ ಪಕ್ಷವನ್ನು ಹಣಿ- ದಿಕ್ಕಲು ತಾವು ಪ್ರಯತ್ನಿಸುತ್ತಿರುವೆವೆಂದು ಹೇಳುತ್ತ ಕೊಲೆ ಸುಲಿಗೆಗಳಿಗೆ ಕೈ ಹಾಕಿರುವರು. ನಮ್ಮ ಶಾಂತಿಮಾರ್ಗವು ಇವರಿಗೆ ರುಚಿಸದು. ನಾವು ಹೇಡಿಗಳೆಂಬ ಅಭಿಪ್ರಾಯವನ್ನು ಜನರಲ್ಲಿ ಇವರು ಬಗೆಬಗೆಯಾಗಿ ಹುಟ್ಟಿಸು ತ್ತಿರುವರು. ಈ ಅನಿಷ್ಟವನ್ನು ತಡೆಯಲು ನಮ್ಮ ಶಕ್ತಿಯನ್ನು ವ್ಯಯಮಾಡ ಬೇಕಾಗಿದೆ. ಆದರೆ ಒಂದು ಸಮಾಧಾನವು. ಈ ಜನರು ಇನ್ನೂ ಅಲ್ಪ- ಸಂಖ್ಯರಿರುವರು. ಜನತೆ ಇವರ ಬಲೆಯಲ್ಲಿ ಬೀಳದಂತೆ ನೋಡಿಕೊಳ್ಳುವ ಕೆಲಸವನ್ನು ಪದ್ಮನಾಭನು ದೇವದತ್ತನಿಗೆ ಒಪ್ಪಿಸಿರುವರು.

"ರುದ್ರನಾಯಕನು ಒಂದು ಬಗೆಯ ಸಮಾಜಕಂಟಕನು, ಶಿವ ನಾಥಾ," ಗುರುದೇವನು ಎಂದರು, "ನೀನು ಹೇಳುವ ಈ ಜನರು ಇನ್ನೊಂದು ಬಗೆಯ ಸಮಾಜಕಂಟಕರು. ಇವರು ಅಲ್ಪಸಂಖ್ಯರೆಂದು ನಾವು ದುರ್ಲಕ್ಷಿಸಲಾಗದು. ರುದ್ರನಾಯಕನಿಂದ ಸಮಾಜದ ದೇಹಕ್ಕೆ ಅಪಾಯವಾಗುತ್ತಿದ್ದರೆ ಈ ಜನರಿಂದ ಸಮಾಜದ ಹೃದಯವು ವಿಕೃತ ವಾಗುವುದು. ಇರಲಿ. ಇವರ ತಂತ್ರವನ್ನು ಮುರಿಯಲು, ಕಾಲಿಂಗಾ, ನಾನೂ ನೀನೂ ಜನರೊಡನೆ ಇದ್ದು ಕೆಲಸ ಮಾಡಬೇಕು. ಸತ್ಯೇಂದ್ರಾ, ನೀನು ಈಗಲೇ ರಾಜಧಾನಿಗೆ ಹೊರಡು. ಮಹಾರಾಜರನ್ನು ಕಂಡು ಎಲ್ಲ

ಸಂಗತಿಯನ್ನು ಅವರಿಗೆ ಅರುಹಿ ಸೈನ್ಯವು ಬಂದು ಮಾಡಬೇಕಾದ ಕೆಲಸವು ಇಲ್ಲವೆಂದು ತಿಳಿಸು. ಶಿವನಾಥನು ಹೇಳಿದ ವೃತ್ತಾಂತದಿಂದ ಒಂದು ಮಾತು ನನಗೆ ಸ್ಪಷ್ಟವಾಗಿದೆ. ನಾಳೆ ಸಂಜೆಯ ಮೊದಲು ರುದ್ರನಾಯಕನು ಪದ್ಮನಾಭನ ವಶದಲ್ಲಿ ಬರುವನೆಂಬುದು ನಿಃಸಂಶಯವು. ಶಿವನಾಥಾ, ನೀನು ಎರಡು ಗಂಟೆ ವಿಶ್ರಾಂತಿ ತೆಗೆದುಕೊಂಡು ಮತ್ತೆ ನಿನ್ನ ಕೆಲಸಕ್ಕೆ ಹೊರಡು. ದೇವದತ್ತನನ್ನು ಕಂಡು ನಾನೂ ಕಾಲಿಂಗನೂ ನಾಳೆ ಇಳಿಹೊತ್ತಿನೊಳಗಾಗಿ ಕೆಲವು ಆಶ್ರಮವಾಸಿಗಳೊಡನೆ ರುದ್ರನಾಯಕನ ಊರಲ್ಲಿ ಬಂದಿರುವೆವೆಂದು ಪದ್ಮನಾಭನಿಗೆ ತಿಳಿಸು. ಕಾಲಿಂಗಾ, ನಾವು ಪ್ರಾತಃಕಾಲದ ಉಪಾಸನೆ ಮುಗಿದ ಬಳಿಕ ಇಲ್ಲಿಂದ ಹೊರಡುವ. ನಮ್ಮ ಜೊತೆಗೆ ಬರುವವರು ಯಾರೆಂಬುದನ್ನು ಗೊತ್ತುಮಾಡಿ ಮಲಗಿಕೊಳ್ಳು."

---

## ೧೬

ಎಲ್ಲರೂ ಎದ್ದರು. ಮುಂದೆ ಅರ್ಧಗಂಟೆಯಲ್ಲಿ ಆಶ್ರಮದೊಳಗೆ ಸಂಪೂರ್ಣ ಶಾಂತಿ.

ಕೊಲ್ಲುವವರು ಬೇರೆ, ಕೊಲ್ಲಿಸಿಕೊಳ್ಳುವವರು ಬೇರೆ, ಮತ್ತು ಆದ ಕೊಲೆಯಿಂದ ಸ್ವಾರ್ಥವನ್ನು ಸಾಧಿಸಿಕೊಳ್ಳುವವರು ಬೇರೆ! ಸಾಯುವವರಿಗಂತೂ ಕಷ್ಟವೆ, ಆದರೆ ಕೊಲ್ಲುವವರಿಗೆ ಕಷ್ಟವು ಕಡಿಮೆಯೆ? ಆದರೆ ಸ್ವಾರ್ಥಸಾಧಕರಿಗೆ ಈ ಕಷ್ಟದ ಗೊಡವೆಯೇಕೆ? ಸಾಯುವ ಮೊಲಕ್ಕೆ ಕಷ್ಟವು, ಕೊಲ್ಲುವ ನಾಯಿಗೆ ಕಷ್ಟವು; ಆದರೆ ಮಾಂಸವನ್ನು ಬೇಯಿಸುವ ಬೇಟೆಗಾರನಿಗೇಕೆ ಆ ಕಷ್ಟದ ಗೊಡವೆ? ಜಗತ್ತು ಒಂದು ವಿಚಿತ್ರವಾದ ರೀತಿಯಿಂದ ಸಾಗಿದೆಂಬಂತೆ ತೋರುತ್ತದಲ್ಲವೆ? ಆದರೆ ಆ ತೋರುತ್ತಿರುವ ವಿಚಿತ್ರತೆಯ ಹಿಂದೆ ಇರುತ್ತಿರುವ ಸೂತ್ರವು ಮತ್ತು ಆ ಸೂತ್ರವನ್ನು ಆಡಿಸುವ ಶಕ್ತಿ ನಮಗೆ ಕಾಣಿಸುವುದಿಲ್ಲ. ಇದು ಮನುಷ್ಯನು ತಿಳಿಯಬೇಕಾದ ಮಾತು.

ಅಂದು ರುದ್ರನಾಯಕನ ಮೊಮ್ಮಗನ ಮದುವೆಯ ನಿಶ್ಚಯದ ದಿನವಾಗಿತ್ತು. ಹೆಣ್ಣಿನವರ ಮುಂದೆ ಗಂಡಿನವರ ಐಶ್ವರ್ಯದ ಪ್ರದರ್ಶನಕ್ಕೆ ಅದೊಂದು ಮಹಾ ಸಂಧಿ! ರುದ್ರನಾಯಕನು ಮಕ್ಕಳಂದಿಗನು. ಆ ಮಕ್ಕಳಿಗೆ ಮಕ್ಕಳು. ಮಕ್ಕಳಿಂದ ತುಂಬಿದ ಐಶ್ವರ್ಯವಂತರ ಮನೆಯಲ್ಲಿ ಇಂತಹ ಪ್ರದರ್ಶನದ ಸಡಗರವನ್ನು ಏನು ಹೇಳಬೇಕು ? ಬಣ್ಣಬಣ್ಣದ ಉಡುಗೆ ತೊಡುಗೆಗಳು, ಬಲ್ಬೆಲೆಯ ತೊಡಪುಗಳು ಹಸುಗೂಸು ಮೊದಲಾಗಿ ಮುಪ್ಪಿನ ಮುದುಕರ ವರೆಗೆ ಎಲ್ಲರ ಮೈಯ್ಯ ಮೇಲೆ ಹೊಳೆಯುತ್ತಿದ್ದುವು. ಅವನ್ನು ನೋಡಲೆಂದು ಎಷ್ಟೋ ಜನರು ಅಂದು ಬಂದು ಹೋದರು. ಇಳಿಹೊತ್ತಿನಲ್ಲಿ ಮೊಗಸಾಲೆಯಲ್ಲಿ ಮನೆಯವರೂ ಹೆಣ್ಣಿನ ಕಡೆಯವರೂ ಊರ ಪ್ರತಿಷ್ಠಿತರೂ, ನೆರೆದರು. ನಿಶ್ಚಯ ಪತ್ರವು ಸಿದ್ಧವಾಯ್ತು. ಎಷ್ಟು ಬಂಗಾರವನ್ನು ಗಂಡಿನವರು ಹೆಣ್ಣಿನ ಮೈಯ್ಯಮೇಲೆ ಇಡಬೇಕು, ಎಷ್ಟು ವರದಕ್ಷಿಣೆಯನ್ನು ವರನಿಗೆ ಹೆಣ್ಣಿನವರು ಕೊಡಬೇಕು ಇವೇ ಮೊದಲಾದ ನೂರೆಂಟು ಸಂಗತಿಗಳು ನಿಶ್ಚಯಪತ್ರದಲ್ಲಿ ಬರೆಯಲ್ಪಟ್ಟಿದ್ದುವು. ಪುರೋಹಿತನು ಆ ಪತ್ರವನ್ನು ಓದುವಾಗ ಎಷ್ಟೋ ಜನರು ಕಿವಿದೆರೆದಂತೂ ನೈ ಬಾಯ್ದೆರೆದೂ ಕೇಳಿದರು! ನೆರೆದವರಿಗೆ ರುದ್ರನಾಯಕನ ಐಶ್ವರ್ಯವನ್ನು ಎಷ್ಟು ಹೊಗಳಿದರೂ ಸಾಲದು. ರುದ್ರನಾಯಕನು ಆ ಆನಂದದ ಪ್ರಸಂಗದಲ್ಲಿ ಗುಡಿ-ಗುಂಡಾರಗಳಿಗೆ, ಮಠ-ಮಳಿಗೆಗಳಿಗೆ, ವಿವಿಧ ಸಂಸ್ಥೆಗಳಿಗೆ ಕೈಬಿಟ್ಟು ಕಾಣಿಕೆಗಳನ್ನು ಕೊಟ್ಟನು. ಪುರೋಹಿತ ವರ್ಗಕ್ಕೆ ಹಿಡಿತುಂಬ ದಕ್ಷಿಣೆ ಕೊಟ್ಟನು. ಎಲ್ಲರೂ ರುದ್ರನಾಯಕನ ಔದಾರ್ಯವನ್ನು ಕೊಂಡಾಡುವವರೆ, ಆದರೆ ರುದ್ರನಾಯಕನಿಗೆ ಇಷ್ಟೊಂದು ಐಶ್ವರ್ಯವು ಹೇಗೆ ಬಂದಿತೆಂದು ವಿಚಾರಿಸುವವರು ಅಲ್ಲಿ ಎಷ್ಟು ಜನರಿದ್ದರೊ? ಒಬ್ಬಿಬ್ಬರು ಗೊಣಗುಟ್ಟಿದರು, "ಹೇಗೋ ಬಂದ ಹಣದ ಒಂದು ಅಂಶವು ಹೇಗೋ ಹೋಗುತ್ತದೆ. ಇದರಲ್ಲಿ ನಾಯಕನ ಔದಾರ್ಯವೇನು ?" ಮತ್ತೆ ಒಬ್ಬಿಬ್ಬರು ಎಂದರು, "ಬೇಟೆಯನ್ನು ಹಿಡಿದು ತಂದ ನಾಯಿ ಬೇಟೆಗಾರನು ಚೆಲ್ಲಿದ ನಾಲ್ಕು ಎಲುವಿನ ತುಣುಕುಗಳಿಗಾಗಿ ಅವನ ಔದಾರ್ಯವನ್ನು ಕೊಂಡಾಡಬೇಕೆ ?" ಆದರೆ ಸ್ತುತಿಯ ಮಹಾಧ್ವನಿಯಲ್ಲಿ ಇವರ ಪಿಸುಮಾತು ಎಲ್ಲಿಯೋ ಅಡಗಿದ್ದಿತು. ಅಂತು ನಿಶ್ಚಯದ ಸಮಾರಂಭವು ಮುಗಿಯಿತು. ಹೆಣ್ಣಿನವರು ತಮ್ಮ ಹುಡಿ-

ಗೆಗೆ ದೊಡ್ಡವರ ಮನೆ ದೊರೆತಿತೆನ್ನುತ್ತ ತಮ್ಮ ಬಿಡಾರದತ್ತ ತಿರುಗಿ ಹೊರಟರು.

ಬಳಿಕ ರುದ್ರನಾಯಕನು ತನ್ನ ಮನೆಯ ಒಳಅಂಗಳದಲ್ಲಿ ಆವೊತ್ತಿನ ಸಮಾರಂಭದ ವಿಜೃಂಭಣೆಯನ್ನು ನೆನೆಯುತ್ತ ಒಂದೆಡೆಯಲ್ಲಿ ಕುಳಿತನು. "ನನ್ನ ಐಶ್ವರ್ಯವು ಯಾರ ಕಣ್ಣುಗಳನ್ನು ಕುಕ್ಕಿಸದು? ಹೆಣ್ಣಿನವರು ಈ ಐಶ್ವರ್ಯವನ್ನು ಕಂಡು ಬೆರಗಾಗಿ ಬೆಗಡುಗೊಂಡರು. ನಾನು ಬೇಡಿದ ವರ ದಕ್ಷಿಣೆಯನ್ನು ಕೊಡಲು ಕೂಡಲೆ ಒಪ್ಪಿದರು. ಹುಡಿಗೆಯ ಮೈಯ್ಯಮೇಲೆ ಇಷ್ಟು ಬಂಗಾರ ಇಷ್ಟು ಬೆಳ್ಳಿ ಬೇಕೆಂದು ಹೇಳಿದರು. ಇನ್ನೂ ಇಷ್ಟನ್ನೂ ಇಡುವೆನೆಂದು ನಾನು ಹೇಳಲು ಅವರಿಗಾದ ಆಶ್ಚರ್ಯವು ಅಷ್ಟಿಷ್ಟೇ? ನನ್ನಲ್ಲಿ ಬೆಳ್ಳಿ-ಬಂಗಾರಗಳಿಗೆ ಕೊರತೆಯಿದ್ದರಷ್ಟೇ! ನನ್ನ ಮನೆಯ ಹಸು-ಗೂಸು ಮೊದಲಾಗಿ ಮುಪ್ಪಿನ ಮುದುಕರು ಮೈಯ್ತುಂಬ ಆಭರಣಗಳನ್ನು ಇಟ್ಟುಕೊಂಡಿದ್ದಾರೆ. ಆದರೇನು? ಇನ್ನೂ ಅದರ ಹತ್ತರಷ್ಟು ಬಿದ್ದಿದೆ! ಯಾರು ಹೊರಬೇಕು ಅಷ್ಟನ್ನು! ಯಾರು ಹೊರಬೇಕು!" ರುದ್ರನಾಯಕನ ವಿಚಾರಪ್ರವಾಹಕ್ಕೆ ತಡೆಯಾಯ್ತು. ಮತ್ತೆ ಅವನು ಎಂದನು, "ಯಾರು ಹೊರಬೇಕು!" ಅವನ ವಿಚಾರವು ಮುಂದೆ ಸಾಗಲೊಲ್ಲದು. ಆ ಶಬ್ದಗಳನ್ನೇ ಮತ್ತೆ ಮತ್ತೆ ಉಚ್ಚರಿಸುತ್ತ ಕುಳಿತನು. ಮುಖವು ಕಪ್ಪು ಹಿಡಿ-ಯಿತು! ಒಂದು ಅಸಹ್ಯವಾದ ಭಾರದ ಕೆಳಗೆ ಕುಪ್ಪಳಿಸುವಂತೆ ಕುಪ್ಪಳಿಸಿದನು. ಸ್ವಲ್ಪ ಹೊತ್ತಾದ ಬಳಿಕ ಚೇತರಿಸಿ ಅವನು ಮತ್ತೆ ಯೋಚಿಸ-ತೊಡಗಿದನು;— "ಯಾರು ಹೊರಬೇಕು ಎಂಬೆನಲ್ಲವೆ? ಈ ಮೊದಲು ಇವನ್ನು ಹೊತ್ತವರು ಹೆಣಗಳಾಗಿ ಹೋಗಿರುವರು. ಇವರನ್ನು ಹೆಣಗಳಾಗಿಸಿದವರು ಯಾರು? ನಾನು, ನನ್ನ ಜನರು! ನನಗೆ ಮತ್ತು ನನ್ನವರಿಗೆ ಇಷ್ಟು ಆಭರಣಗಳಾಗಲು ಇಷ್ಟೊಂದು ಜನರು ಹೆಣಗಳಾಗಬೇಕಾಯ್ತು! ತಾಯಿಯ ತೊಡೆಯ ಮೇಲಿನ ಮಗು, ಮಗುವನ್ನು ಆಡಿಸುತ್ತಿದ್ದ ತಾಯಿ, ಕೆಲೆ-ದಾಡುವ ಮಕ್ಕಳು, ಅತ್ತೆಯ ಮನೆಗೆ ಹೋಗುತ್ತಿದ್ದ ಸೊಸೆ, ತವರು ಮನೆಗೆ ಬರುತ್ತಿದ್ದ ಮಗಳು, ಇನ್ನೂ ಯಾರು ಯಾರೋ ನನಗೋ-ಸುಗ ಹೆಣವಾಗಬೇಕಾಯ್ತು! ಇವರಲ್ಲಿ ನನಗೆ ಶತ್ರುವಾದವರು ಯಾರೂ ಇರಲಿಲ್ಲ. ಆದರೆ ನಾನು ಇವರೆಲ್ಲರಿಗೆ ಶತ್ರುವಾದೆನು. ಶತ್ರುಗಳೊಡನೆ

ಶೌರ್ಯದಿಂದ ಕಾದಿ ಗೆದ್ದು ಸಂಪತ್ತನ್ನು ಸಂಪಾದಿಸಿದ್ದರೆ ಅದೊಂದು ರೀತಿಯಾಗುತ್ತಿತ್ತು. ಆದರೆ ನಿರುಪದ್ರವಿಗಳನ್ನು ಗೋಳಿಕ್ಕಿದ ನನ್ನವರ ಶೌರ್ಯವೆಂತಹುದು? ನಮ್ಮ ಕ್ರೌರ್ಯವನ್ನು ಧೈರ್ಯದಿಂದ ಎದು- ರಿಸುವವರು ಇರಲಿಲ್ಲವೆಂಬು ನಮ್ಮ ಶೌರ್ಯವಷ್ಟೇ! ಆ ಹುಡುಗನು ಬಂದು ಜನರಲ್ಲಿ ಧೈರ್ಯವನ್ನು ತುಂಬಿದ ಬಳಿಕ, ಅವರ ಶಕ್ತಿಯ ಅರಿವನ್ನು ಅವರಿಗೆ ಮಾಡಿಕೊಟ್ಟ ಬಳಿಕ ನಮ್ಮವರ ಶೌರ್ಯವು ಎಲ್ಲಿದೆ? ನಮ್ಮವರಲ್ಲಿ ಒಬ್ಬನಿಗಾದರೂ ಇರುವುದೇ ಆ ಹುಡುಗನ ತೇಜಸ್ಸು, ಆತನ ಧೈರ್ಯ, ಆತನ ಸಾಹಸ, ಆತನ ಗಾಂಭೀರ್ಯ? ಎಷ್ಟು ನಿರ್ಭಯನು ಆ ಹುಡುಗನು! ಮೃತ್ಯುವಿನ ಹಲ್ಲುಗಳು ಆತನಿಗೆ ಮಲ್ಲಿಗೆಯ ಮೊಗ್ಗುಗಳಂತೆ ತೋರು ವುವಲ್ಲವೆ? ಹೇಗೆ ಬಂದಿರಬಹುದು ಆತನಿಗೆ ಇಷ್ಟೊಂದು ನಿರ್ಭಯತೆ? ತನ್ನ ಗುಣಗಳಿಂದ ಆತನು ಜನರ ಹೃದಯವನ್ನು ಬಲವಾಗಿ ಸೆಳೆದಿರುವನು. ನಮ್ಮ ಜನರ ಹೆಸರನ್ನು ಕೇಳಿದರೆ ನಡುಗುವ ಜನರು ಆತನಿಂದ ಧೈರ್ಯಗೊಂಡು ಸ್ಥಿರವಾಗಿ ನಿಂತು ಅವರನ್ನು ಎದುರಿಸುತ್ತಿರುವರು. ನನ್ನವರು ನಾಲ್ಕುದಿನ ಗಳಲ್ಲಿ ಹತಪ್ರಭರಾಗಿರುವರು. ಹಣದ ಆಶೆಯಿಂದ ಕೊಲೆಗೆಲಸಕ್ಕೆ ಎತ್ತಿದ ಕೈಯ ಬಲವು ಎಷ್ಟೆಂಬುದು ಈಗ ನನಗೆ ಗೊತ್ತಾಯ್ತು!"

ರುದ್ರನಾಯಕನು ಈ ಬಗೆಯಾಗಿ ಯೋಚಿಸುತ್ತಿರುವಾಗ "ಜಯ, ಗುರುದೇವ!" ಎಂಬ ಘೋಷವು ಅವನ ಕಿವಿಗೆ ಬಂದಿತು. ಆಗ ತಲೆಬಾಗಿಲ ಕಡೆಗೆ ಅವನ ದೃಷ್ಟಿ ಹೋಯ್ತು. ತರುಣನೊಬ್ಬನು ತನ್ನ ಕಡೆಗೆ ಬರುತ್ತಿರು ವುದನ್ನು ಕಂಡು ಯಾರಿರಬಹುದೆಂದು ನೋಡಿದನು. ಅಷ್ಟರಲ್ಲಿ ತರುಣನು ಮುಂದೆ ಬಂದು ನಿಂತನು. ಆತನು ಪದ್ಮನಾಭನು! ಅಕಸ್ಮಾತ್ತಾಗಿ ಪದ್ಮ ನಾಭನು ತನ್ನ ಮುಂದೆ ಬಂದು ನಿಂತುದನ್ನು ಕಂಡು ರುದ್ರನಾಯಕನು, "ಇದೇನು ಈತನು ಹೀಗೆ ಬಂದನು!" ಎನ್ನುತ್ತ ಎರಡು ಹೆಜ್ಜೆ ಹಿಂದೆ ಸರಿ ದನು. ಎರಡು ಕ್ಷಣ ಇಬ್ಬರೂ ಮೌನಗೊಂಡಿದ್ದರು. ಬಳಿಕ ಪದ್ಮನಾಭನು, "ನಾನು ನಿಮ್ಮವನು ರುದ್ರನಾಯಕರೇ, ಹಿಂದೆ ಸರಿಯಲು ಕಾರಣವಿಲ್ಲ."

"ನೀನು ನಮ್ಮವನು? ನೀನು ನನ್ನ ಶತ್ರು!"

"ಅಜಾತಶತ್ರುವಾದ ಸತ್ಯಾನಂದರ ಶಿಷ್ಯನು ಯಾರ ಶತ್ರುವೂ ಅಲ್ಲ!"

"ನನ್ನ ಕಾರ್ಯಕ್ಕೆ ನೀನು ಅಡ್ಡ ಬರುತ್ತಿರುವೆ, ನೀನು ನನ್ನ ಶತ್ರು."

"ನೀವು ಅಕಾರ್ಯವನ್ನು ಮಾಡುತ್ತಿರುವಿರಿ. ಅದನ್ನು ಬಿಡಿಸಿ ನಿಮ್ಮಿಂದ ಕಾರ್ಯವನ್ನು ಮಾಡಿಸಲು ಗುರುದೇವನ ಅಡಿಯಲ್ಲಿ ನಾನು ಪ್ರತಿಜ್ಞೆಗೈದಿರುವೆನು   ನಾನು ನಿಮ್ಮ ಮಿತ್ರನು."

" ನನ್ನ ವಿಷಯದಲ್ಲಿ ನೀನು ಜನರಲ್ಲಿ ದ್ವೇಷವನ್ನು ಹುಟ್ಟಿಸುತ್ತಿರುವೆ. ನೀನು ನನ್ನ ದ್ವೇಷಿ."

" ಜನರ ವಿಷಯದಲ್ಲಿ ನಿಮ್ಮಲ್ಲಿ ಪ್ರೇಮವನ್ನು ಹುಟ್ಟಿಸಲು ನಾನು ಯತ್ನಿಸುತ್ತಿರುವೆನು. ನಾನು ನಿಮ್ಮ ಸ್ನೇಹಿತನು."

"ಕಲ್ಲಲ್ಲಿ ನೀರನ್ನು ಹುಟ್ಟಿಸಬಲ್ಲೆಯಾ "

"ಮಾನವನ ಹೃದಯವು ಕಲ್ಲಲ್ಲ, ನಾಯಕರೇ; ಮಾನವನ ಹೃದಯವು ಅಮೃತದ ನಿಧಿ. ಈ ನಿಧಿಯ ಸುತ್ತಲು ಏಕೋ ಒಂದು ಕಲ್ಲಿನ ಗೋಡೆ ನಿಂತಿದ್ದರೆ ಅದನ್ನು ಒಡೆಯುವುದಷ್ಟೇ ನನ್ನ ಕೆಲಸವು. ಬಳಿಕ ಅಮೃತವು ತಾನಾಗಿಯೆ ಹೊನಲಾಗಿ ಹರಿವುದು."

"ಗೋಡೆ ವಜ್ರದ ಗೋಡೆಯಾಗಿದ್ದರೆ ? "

" ಕಲ್ಲಿನದಾಗಿರಲಿ, ವಜ್ರದದಾಗಿರಲಿ, ಗೋಡೆಯೆಂಬುದು ಕೃತಕವಾದುದು. ಕೃತಕವಾದುದು ಅಭೇದ್ಯವಲ್ಲವಷ್ಟೇ. ಪ್ರೇಮವಜ್ರದ ಆಘಾತಕ್ಕೆ ನಿಮ್ಮ ಕೃತಕ ವಜ್ರವು ಪುಡಿಯಾಗದೇ ? "

" ಹುಡುಗನೇ ನಿನ್ನದು ಅಂತಹ ಪ್ರೇಮವೇ ? "

" ನನ್ನ ಗುರುದೇವನ ಪ್ರೇಮವು ಅಂತಹದು. ನಾಯಕರೇ, ನಿಮ್ಮ ಹೃದಯದ ಸುತ್ತಲೂ ಇರುವ ಗೋಡೆಗೆ ಅಘಾತಗಳನ್ನು ಕೊಡುತ್ತಿರುವುದು ನನ್ನ ಹಿಂದೆ ಇರುವ ನನ್ನ ಗುರುದೇವನ ಅದ್ಭುತವಾದ ಪ್ರೇಮ ಶಕ್ತಿ !"

" ಅಹುದು, ವೀರಾ ! ನಿನ್ನ ವೀರವಾಣಿ ಈ ಅಘಾತಗಳ ಮಹಾನಿನಾದವೇ ಆಗಿದೆ. ಆದರೆ ನನ್ನ ಹೃದಯಕ್ಕೆ ಮೆತ್ತಿದ ಮಲವು ಅಳಿಯಬಹುದೇ?"

" ನಾಯಕರೆ, ಆಗಂತುಕವಾಗಿ ಬಂದುದು ಶಾಶ್ವತವಾಗಿ ಉಳಿವುದೆಂತು? ಅದು ಹೋಗಿಯೇ ತೀರಬೇಕಲ್ಲವೆ ? "

" ಉಪಾಯವು ? "

" ಪಶ್ಚಾತ್ತಾಪವು. ಪಶ್ಚಾತ್ತಾಪದ ಅಗ್ನಿ ಮಹಾಗ್ನಿ "

" ಮುಂದೆ ? ನೀನು ನನ್ನಿಂದ ಮಾಡಿಸಬೇಕೆಂಬ ಕಾರ್ಯವು-ಸತ್ಕಾರ್ಯವು-ನನ್ನಿಂದ ಆಗುವುದೇ ? "

" ಕಿಟ್ಟವು ಸುಟ್ಟಬಳಿಕ ಹೊನ್ನು ಹೊಳೆಯದೆ ? "

"ಮಿತ್ರಾ, ನೀನು ನನ್ನನ್ನು ವಶವಮಾಡಿಕೊಂಡೆ! "

" ನಿಮ್ಮನ್ನು ನಾನು ವಶಮಾಡಿಲ್ಲ. ನನ್ನ ಗುರುದೇವನ ಪ್ರೇಮಪಾಶದಲ್ಲಿ ನೀವು ಸಿಕ್ಕಿದಿರಿ, ತಾತಾ ! "

"ಮಗನೇ, ನೀನೇ ನಿನ್ನ ಗುರುದೇವನ ಪ್ರೇಮಪಾಶವು ! ಈ ಪ್ರೇಮಪಾಶವನ್ನು ನಿರ್ಮಿಸಿದ ನಿನ್ನ ಗುರುದೇವನೆಲ್ಲಿ ?

ಆ ಹೊತ್ತಿಗೆ "ಜಯ, ಗುರುದೇವ! " ಎಂಬ ಮಹಾನಿನಾದವು ಆಕಾಶವನ್ನು ವ್ಯಾಪಿಸಿತು. ಪದ್ಮನಾಭನ ಮತ್ತು ರುದ್ರನಾಯಕನ ದೃಷ್ಟಿ ಹೊರಗೆ ಹೋಯ್ತು. " ಭಗವನ್, ಗುರುದೇವಾ ! " ಎನ್ನುತ್ತ ಪದ್ಮನಾಭನು ಒಳಗೆ ಬರುತ್ತಿರುವ ಸತ್ಯಾನಂದರ ಕಡೆಗೆ ಆನಂದಪೂರ್ಣವಾದ ಮುಖಮುದ್ರೆಯಿಂದ ಧಾವಿಸಿದನು. ರುದ್ರನಾಯಕನು ಅತ್ಯಂತ ವಿನಯದಿಂದಲೂ ಭಕ್ತಿಯಿಂದಲೂ ಮುಂದೆ ಬಂದು ಗುರುದೇವನ ಅಡಿಗಳ ಮೇಲೆ ಹಣೆಯಿಟ್ಟನು. ಗುರುದೇವನ ಅಡಿಗಳು ಅವನ ಕಂಬನಿಗಳಿಂದ ತೊಯ್ದುವು.

ಗುರುದೇವನೊಡನೆ ಬಂದಿದ್ದ ಕಾಲಿಂಗನು ಪದ್ಮನಾಭನ ಹೆಗಲಮೇಲೆ ಕೈಯಿರಿಸಿ, "ಮಗು, ನನ್ನ ಕಣ್ಣುಗಳು ಇಂದು ಸಫಲವಾದುವು. ಹೀಗೆಯೆ ಶುಭಕಾರ್ಯಗಳಲ್ಲಿ ನಿರತನಾಗಿ ನೂರುವರ್ಷ ಬಾಳು, ಕಂದಾ ! " ಎಂದು ಬಾಷ್ಪಲೋಚನನಾಗಿ ನುಡಿದು ಆತನನ್ನು ಬಿಗಿಯಾಗಿ ಅಪ್ಪಿಕೊಂಡನು. ಪದ್ಮನಾಭನು, "ಮಾಮಯ್ಯಾ, ನಿಮ್ಮ ಅಮೃತಹಸ್ತದ ಪುಣ್ಯವು ಇದು, " ಎಂದನು. ಕಾಲಿಂಗನ ಹೆಗಲು ಪದ್ಮನಾಭನ ಕೃತಜ್ಞತಾಶ್ರುಗಳಿಂದ ತೊಯ್ದಿತು. ಧನ್ಯನಯ್ಯಾ ನೀನು, ಕಾಲಿಂಗಾ! ವಂದ್ಯನಾದ ನಿನ್ನಡಿಗೆ ನನ್ನ ತಲೆ ಬಾಗುವುದು.

ಗುರುದೇವನ ಅಂದಿನ ಸಾಯಂಕಾಲದ ಉಪಾಸನೆ ರುದ್ರನಾಯಕನ ಮನೆಯಲ್ಲಿಯೇ ನೆರವೇರಿತು.

---

೧೭

ಮುಂದೆ ನಾಲ್ಕನೆಯ ದಿನ ವಿಜಯಪುರದಲ್ಲಿ ವಿಜಯಚಂದ್ರ ಮಹಾರಾಜನು ತನ್ನ ಶ್ರೀಗೃಹದಲ್ಲಿ ಒಂದು ಚಿತ್ರಪಟವನ್ನು ಎವೆಯಿಕ್ಕದೆ ನೋಡುತ್ತ ಕುಳಿತಿದ್ದನು. ಆತನ ಮುಖದ ಮೇಲೆ ಹೃದಯದ ಭಿನ್ನ ಭಿನ್ನ ಸಾತ್ತ್ವಿಕಭಾವಗಳು ಕ್ಷಣಕ್ಕೊಂದು ಬಗೆಯಾಗಿ ಒಡಮೂಡುತ್ತಿದ್ದುವು. ಆಶ್ಚರ್ಯ, ಆದರ, ಆನಂದ, ಕೃತಜ್ಞತೆ, ಪ್ರೇಮ ಒಂದರ ಹಿಂದೊಂದು ದೃಗ್ಗೋಚರವಾಗುತ್ತಿದ್ದುವು. ಚಿತ್ರದಲ್ಲಿ ಆತನ ಚಿತ್ತವು ತಲ್ಲೀನವಾಗಿದ್ದಿತು. ಮಗಳು ರಾಜಲಕ್ಷ್ಮಿ ಬಂದು ಹೊರಗಿನಿಂದ, "ಅಪ್ಪಾ," ಎಂದು ಮೆಲ್ದನಿಯಿಂದ ಕರೆದಳು. ಚಿತ್ರವು ಆತನ ಚಿತ್ತವನ್ನು ಸೆಳೆದಿದ್ದಿತಾದುದರಿಂದ ಮಗಳ ದನಿ ಆತನ ಕಿವಿಯಲ್ಲಿ ಹೋಗಲಿಲ್ಲ. ಆಕೆ ಮೆಲ್ಲನೆ ಬಾಗಿಲನ್ನು ತೆರೆದು ಹಣಿಕಿ ನೋಡಿದಳು. ರಾಜನು ಚಿತ್ರವನ್ನು ನೋಡುತ್ತ ಮೈಮರೆತಿದ್ದುದು ಆಕೆಗೆ ಕಾಣಬಂದಿತು. ತಾನೂ ನೋಡುತ್ತ ನಿಂತಳು. ಕ್ಷಣಾರ್ಧದಲ್ಲಿ ಆ ಚಿತ್ರವು ಆಕೆಯನ್ನೂ ಮೋಹಗೊಳಿಸಿತು. ತಾರುಣ್ಯ, ಸೌಂದರ್ಯ, ಗಾಂಭೀರ್ಯ, ಸೌಜನ್ಯ, ಔದಾರ್ಯ, ವೀರವೃತ್ತಿ ಚಿತ್ರಪುರುಷನ ಅಂಗಾಂಗಗಳಲ್ಲಿ ಉಕ್ಕುತ್ತಿದ್ದುವು. ಹೃದಯದ ಪಾವಿತ್ರ್ಯವು ಆಪಾದಮಸ್ತಕವಾಗಿ ವ್ಯಾಪಿಸಿದ್ದಿತು. ರಾಜಕುಮಾರಿಯ ಹೃದಯವು ಆನಂದ, ಆದರ, ಪ್ರೇಮಗಳಿಂದ ತುಂಬಿತು. ಹಾಗೆಯೆ ಸ್ವಲ್ಪಹೊತ್ತು ನಿಂತು ಮತ್ತೊಮ್ಮೆ, "ಅಪ್ಪಾ," ಎಂದು ತಂದೆಯ ಲಕ್ಷ್ಯವನ್ನು ತನ್ನ ಕಡೆಗೆ ತಂದುಕೊಳ್ಳಲು ಯತ್ನಿಸಿದಳು. ವಿಜಯಚಂದ್ರನು ತಿರುಗಿ ನೋಡಿದನು, ಮತ್ತು ಮಗಳು ನಿಂತುದನ್ನು ಕಂಡು, "ಕುಳಿತು ಕೊಳ್ಳು, ತಾಯೀ!" ಎಂದು ಪ್ರೇಮದಿಂದ ಅವಳನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡನು.

"ಅಪ್ಪಾ, ಹಾಲು ಕಾಯ್ದಿದೆ, ತರಬಹುದೆ?" ರಾಜಲಕ್ಷ್ಮಿ ಕೇಳಿದಳು.

"ತಾ, ಮಗು; ನಾನೇನೊ ಚಿತ್ರದಲ್ಲಿ ಮಗ್ನನಾಗಿದ್ದನು. ಕಾಲದ ಅರಿವೇ ಇಲ್ಲದಾಯ್ತು ನನಗೆ! ನೀನು ಹಸಿದಿರುವೆಯಮ್ಮಾ. ಇಷ್ಟು ಹೊತ್ತು ನೀನು ಹಾಗೆಯೆ ಉಳಿಯಬೇಕಾಯ್ತಲ್ಲ. ಇನ್ನು ಮುಂದೆ ನನಗೋಸುಗ ಕಾಯಬೇಡ. ತಾಯೀ."

ರಾಜಲಕ್ಷ್ಮಿ ಬಿಸಿಹಾಲಿನ ತಂಬಿಗೆಯನ್ನೂ ಎರಡು ಬಟ್ಟಲುಗಳನ್ನೂ ಒಂದು ತಟ್ಟೆಯಲ್ಲಿ ಇಟ್ಟುಕೊಂಡು ತಂದು ತಂದೆಯ ಮುಂದೆ ಇಟ್ಟು ಬಳಿಯಲ್ಲಿ ಕುಳಿತುಕೊಂಡಳು. ರಾಜನು ಎರಡೂ ಬಟ್ಟಲುಗಳನ್ನು ತುಂಬಿ, "ತೆಗೆದುಕೊಳ್ಳು, ಮಗು," ಎಂದು ಒಂದು ಬಟ್ಟಲನ್ನು ಎತ್ತಿ ಆಕೆಯ ಕೈಯಲ್ಲಿಟ್ಟು ತಾನೂ ಒಂದು ಬಟ್ಟಲನ್ನು ತೆಗೆದುಕೊಂಡನು. ಎರಡು ಮೂರು ಗುಟುಕು ಕುಡಿವುದಾದ ಬಳಿಕ ರಾಜನೆಂದನು,"ರಾಜಲಕ್ಷ್ಮೀ,ನೋಡಿದೆಯಾ ಈ ಚಿತ್ರವನ್ನು ?"

"ಯಾವ ಮಹಾನುಭಾವನು ಈತನು, ಅಪ್ಪಾ ?"

"ರುದ್ರನಾಯಕನನ್ನು ವಶಗೊಳಿಸಿದ ವೀರವರನು ಈತನು."

"ಎಲ್ಲಿಯೋ ನಡೆದಿರುವನಲ್ಲ ? ಎಲ್ಲಿ ?"

"ರುದ್ರನಾಯಕನ ಮನೆಯ ಕಡೆಗೆ."

"ಅವನನ್ನು ವಶಮಾಡಲೊ ?"

"ಅಹುದು."

"ಅಶಸ್ತ್ರನಾಗಿ ಒಬ್ಬನೇ ಹೊರಟಿರುವನಲ್ಲ !"

"ಆದುದರಿಂದಲೇ ಈತನು ವೀರವರನು !"

"ಅಬ್ಬಾ, ಏನು ಈತನ ಕಣ್ಣುಗಳ ತೇಜಸ್ಸು ! ಏನು ಈತನ ನಡೆವ ರೀತಿ ! ಮಹಾಕವಿಯ ಉತ್ತರ ರಾಮಚರಿತದಲ್ಲಿಯ ಶ್ಲೋಕವು ನೆನಪಿಗೆ ಬರುತ್ತಿದೆ.

"ಯಾವುದು ಆ ಶ್ಲೋಕವು ? ಹೇಳು, ಮಗಳೇ."

"ಆರನೆಯ ಅಂಕದಲ್ಲಿಯ ಶ್ಲೋಕವು:—

दृष्टिस्तृणीकृतजगत्त्रयसत्त्वसारा
धीरोद्धता नमयतीव गतिर्धरित्रीम् ॥
कौमारकेऽपि गिरिवद् गुरुतां दधानो ।
वीरो रसः किमयमेत्युत दर्प एव ॥

ಆದರೆ, ಅಪ್ಪಾ, ಇಲ್ಲಿ ದರ್ಪದ ಲವಲೇಶವೂ ಇಲ್ಲ. ವಿನಯದಿಂದ ಮುಖವು ಬಹು ಮಧುರವಾಗಿ ಶೋಭಿಸುತ್ತದೆ. ಈತನು ಚಿತ್ರ ಬರೆದವನ

ಅಂತಃಕರಣವನ್ನು ಸಂಪೂರ್ಣವಾಗಿ ಸೆಳೆದಿರುವನು. ಇಲ್ಲದಿದ್ದರೆ ಇಷ್ಟೊಂದು ತದ್ರೂಪತೆ ಇಲ್ಲಿ ಬರುತ್ತಿರಲಿಲ್ಲ. ಚಿತ್ರ ಬರೆದವನು ಯಾರು?"

"ಈತನ ತಮ್ಮನು."

"ಭ್ರಾತೃವತ್ಸಲನಾದ ಈ ಮಹಾನುಭಾವನಿಗೆ ನಮಸ್ಕಾರವು!"

"ಈತನನ್ನು ಪಡೆದ ತಂದೆ ತಾಯಿಗಳು ಧನ್ಯರು!"

"ಮತ್ತು—" ರಾಜಲಕ್ಷ್ಮಿ ಅರ್ಧೋಕ್ತಿಗೆ ತಡೆದಳು.

"ಮಾತನ್ನು ಮುಗಿಯಿಸು, ಮಗು!"

"ಈತನ ಕೈಹಿಡಿದ ಕುಮಾರಿ ಧನ್ಯೆ!"

"ಮಗಳೆ, ಈ ಭಾಗ್ಯವು ನಿನ್ನದು!"

"ರಾಜರ್ಷಿ ವಿಜಯಚಂದ್ರ ಮಹಾರಾಜರ ಆಶೀರ್ವಾದವು ಅಮೋಘವು!"

"ರಾಜಲಕ್ಷ್ಮಿ, ಈ ಪತ್ರವನ್ನು ಓದು. ಸೇನಾಪತಿಯಿಂದ ಬಂದಿದೆ."

ವಿಜಯಚಂದ್ರ ಮಹಾರಾಜನು ಪತ್ರವನ್ನು ಮಗಳ ಕೈಯಲ್ಲಿ ಇಟ್ಟನು. ಅವಳು ಅರಳಿದ ಕಣ್ಣುಗಳಿಂದ ಅದನ್ನು ಓದಿದಳು; ಬಳಿಕ ವಿಶ್ವಾಸ ಪೂರ್ಣವಾದ ಧ್ವನಿಯಿಂದ ಎಂದಳು, "ಅಪ್ಪಾ, ನಿಮ್ಮ ಒಪ್ಪಿಗೆ ಇರುತ್ತದಷ್ಟೇ?"

"ಈ ಮೊದಲೆ ನಿನಗೆ ನಾನು ಆಶೀರ್ವಾದ ಮಾಡಿರುವೆನು, ಮಗು."

"ಅಪ್ಪಾ, ನೀವು ನನಗೆ ತಂದೆಯೂ ಅಹುದು, ತಾಯಿಯೂ ಅಹುದು!"

ಮಗಳು ತಂದೆಯ ಅಡಿಗೆ ಹಣೆಚಾಚಿದಳು.

---

## ೧೮

ಗುರುದೇವನು ಸತ್ಯೇಂದ್ರನು ರಾಜಧಾನಿಗೆ ಹೋಗಿ ರಾಜನನ್ನು ಕಂಡು ರುದ್ರನಾಯಕನ ವಿಷಯದಲ್ಲಿ ಎಲ್ಲ ಸಂಗತಿಯನ್ನು ಅರುಹಿ, ಸೈನ್ಯವು ಬಂದು ಮಾಡಬೇಕಾದ ಕೆಲಸವು ಇಲ್ಲವೆಂದು ತಿಳಿಸಬೇಕೆಂದು ಹೇಳಿದುದನ್ನು ವಾಚಕರು ಮರೆತಿರಲಿಕ್ಕಿಲ್ಲವಷ್ಟೇ? ಸತ್ಯೇಂದ್ರನು ರಾಜಧಾನಿಗೆ ಹೋಗಿ ರಾಜನನ್ನು ಕಂಡು ಎಲ್ಲ ಸಂಗತಿಯನ್ನು ಅರುಹಿದನು, ಮತ್ತು ಗುರುದೇವನು ಹೇಳಿದಂತೆ ಸೈನ್ಯದ ಕೆಲಸವು ಇಲ್ಲವೆಂಬುದನ್ನು ಸೂಚಿಸಿದನು. ಆದುದರಿಂದ

ರಾಜಧಾನಿಯಿಂದ ಸೈನ್ಯವು ಹೊರಡಲಿಲ್ಲ. ಆದರೆ ಪರಿಸ್ಥಿತಿಯನ್ನು ಕಣ್ಣಾರೆ ನೋಡಬೇಕೆಂದು ರಾಜನಿಂದ ಆಜ್ಞಪ್ತನಾಗಿ ಸೇನಾಪತಿ ಇಪ್ಪತ್ತು ಇಪ್ಪತ್ತೈದು ಯೋಧರೊಡನೆ ರಾಜಧಾನಿಯಿಂದ ಹೊರಟು ಬಂದು ಎಲ್ಲವನ್ನು ಪ್ರತ್ಯಕ್ಷವಾಗಿ ಕಂಡನು. ಪದ್ಮನಾಭನು ತನ್ನ ತ್ಯಾಗದಿಂದ, ಧೈರ್ಯದಿಂದ, ಸಾಹಸದಿಂದ ಮತ್ತು ನಿರ್ಮಲ ಪ್ರೇಮದಿಂದ ಸಂತ್ರಸ್ತ ಜನರ ವಿಶ್ವಾಸ ವನ್ನೂ ಆದರವನ್ನೂ ಹೇಗೆ ಸಂಪಾದಿಸಿದನು, ಅವರಲ್ಲಿ ಧೈರ್ಯವನ್ನು ತುಂಬಿ, ಸ್ವಾಭಿಮಾನವನ್ನು ಜಾಗೃತಗೊಳಿಸಿ ರುದ್ರನಾಯಕನ ಜನರನ್ನು ಇದಿರಿಸಲು ಅವರನ್ನು ಹೇಗೆ ಸಜ್ಜುಗೊಳಿಸಿದನು, ತಾನೊಬ್ಬನೆ ರುದ್ರನಾಯು ಕನ ಮನೆಗೆ ಹೋಗಿ, ಅವನನ್ನು ಕಂಡು, ವಾಕ್ಚಾತುರ್ಯದಿಂದ ಮತ್ತು ಶುದ್ಧ ಪ್ರೇಮದಿಂದ ಅವನ ಅಂತಃಕರಣವನ್ನು ಸೆಳೆದು ಅವನನ್ನು ಹೇಗೆ ವಶ ಮಾಡಿಕೊಂಡನು, ಎಂಬುದನ್ನು ಅವನು ಕೇಳಿದನು. ಸೇನಾಪತಿಗೆ ಆಶ್ಚರ್ಯ-ವಾಯಿತು. ಪದ್ಮನಾಭನ ವಿಷಯದಲ್ಲಿ ಅವನ ಅಂತಃಕರಣವು ಪ್ರೇಮ-ಆದರಗಳಿಂದ ತುಂಬಿತು. ಪದ್ಮನಾಭನಲ್ಲಿ ಇಷ್ಟೊಂದು ಅದ್ಭುತವಾದ ಕರ್ತೃತ್ವಶಕ್ತಿ ಉಂಟಾಗಲು ಆತನು ಮಹಾತ್ಮರಾದ ಸತ್ಯಾನಂದರ ಪಾವನವೂ ಪ್ರಭಾವಿಯೂ ಆದ ಸಹವಾಸದಲ್ಲಿ ಬೆಳೆದುದೇ ಕಾರಣವೆಂಬುದನ್ನು ಅರಿತು ಸೇನಾಪತಿ ಆ ಮಹಾತ್ಮರನ್ನು ಕಾಣಲು ಕುತೂಹಲವುಳ್ಳವನಾದುದು ಸೋಜಿಗವಲ್ಲ.

ಸೇನಾಪತಿ ರುದ್ರನಾಯಕನ ಊರಿಗೆ ಬರುವ ಮೊದಲೆ ಗುರುದೇವನು ಪದ್ಮನಾಭನೊಡನೆ ಆಶ್ರಮಕ್ಕೆ ಮರಳಿ ಹೋಗಿದ್ದರು. ರುದ್ರನಾಯಕನೂ ಅವರ ಜೊತೆಯಲ್ಲಿ ಇದ್ದನು. ಗುರುದೇವನ ಸೂಚನೆಯಂತೆ ಕಾಲಿಂಗನು ಶಾಂತಿಯನ್ನು ಕಾಯಲು ತಾನೇ ಅಲ್ಲಿ ಉಳಿದು ದೇವದತ್ತನನ್ನು ಆಶ್ರಮಕ್ಕೆ ಕಳಿಸಿದನು. ಸೇನಾಪತಿ ಗುರುದೇವನನ್ನು ಕಾಣಲು ಕುತೂಹಲವುಳ್ಳವನಾದು ದರಿಂದ ಶಾಂತಿಭಂಗವಾಗದಂತೆ ನೋಡಿಕೊಳ್ಳಲು ಹತ್ತೆಂಟು ಸೈನಿಕರಿಗೆ ಅಲ್ಲಿ ಇರಹೇಳಿ ತಾನು ಆಶ್ರಮಕ್ಕೆ ಹೋದನು.

ಸೇನಾಪತಿ ಆಶ್ರಮಕ್ಕೆ ಹೋದಾಗ ಉಪಾಸನೆಯ ಬಯಲಲ್ಲಿ ಸಂಜೆಯ ಉಪಾಸನೆ ಪ್ರಾರಂಭವಾಗಿದ್ದಿತು. ಗುರುದೇವನ ಆಜ್ಞೆಯಿಂದ ಪದ್ಮನಾಭನು ಈ ಕೆಳಗಿನ ಹಾಡನ್ನು ಹಾಡುತ್ತಿದ್ದನು.

ರಾಗ: — ತೋಡಿ.

ನಿನ್ನ ಕೈಗೂಸಾಗಿ ನಲಿವೆನೆಂದು,
ಸನ್ನುತಾಂಘ್ರೀ, ಸಚ್ಚಿದಾನಂದ, ದೇವಾ ? ‖ ಪಲ್ಲ ‖
ಬಿರುಗಾಳಿಗಳು, ತಂದೆ, ನಿನ್ನ ದನಿಯನು ತಮ್ಮ
ಬಿರುಸರದೊಳಡಗಿಸಲು ಹವಣಿಸುವುವು ‖
ಶರಣು ನೀನೇ ಎಂದು ನಿನ್ನ ಸೊಲ್ಲನೆ ಕೇಳು-
ತಿರುವ ಭಾಗ್ಯವು ನನಗೆ ಬರುವದೆಂದು ? ‖ ೧ ‖
ಹೆರರಿಗಂಜದೆ, ಹೆರರನಂಜಿಸದೆ. ಸತ್ಯ ನಿ-
ಷ್ಠುರನಾಗಿ, ಸೌಜನ್ಯಮಧುರನಾಗಿ ‖
ದೊರೆಯೆ, ನಿನ್ನೆಳನಗೆಯ ತಂಬೆಳಗಿನೊಳು ಸುಖಿಸು-
ತಿರುವ ಭಾಗ್ಯವು ನನಗೆ ಬರುವುದೆಂದು ? ‖ ೨ ‖
ಹೊರಗೊಳಗೆ ಹಸನಾಗಿ, ಹೂವವೊಲು ಹಗುರಾಗಿ,
ಪರಮಾತ್ಮ, ನಿನ್ನ ಕೈಗೊಪ್ಪುವಂತೆ ‖
ಸ್ಥಿರಚಿತ್ತನಾಗಿ ನಿನ್ನನು ಮೆಚ್ಚಿಸುತೆ, ತಂದೆ,
ಇರುವ ಭಾಗ್ಯವು ನನಗೆ ಬರುವುದೆಂದು ? ‖ ೩ ‖

ಹಾಡು ಗಂಭೀರಾರ್ಥವುಳ್ಳದು, ಹಾಡುವವನು ಕಿನ್ನರಕಂಠನು ಮತ್ತು ಭಕ್ತಿಪೂರ್ಣ ಹೃದಯನು, ಮತ್ತು ಸಮಯವು ಅತ್ಯಂತ ಪಾವನವಾದುದು. ಪ್ರತಿಯೊಂದು ಶಬ್ದದ ಅರ್ಥವು, ಮತ್ತು ಇಡಿಯ ಪದ್ಯದ ಭಾವವು ಉಪಾಸಕರ ಹೃದಯದಲ್ಲಿ ಗಾಢವಾಗಿ ನೆಲಸಿದುದರಲ್ಲಿ ಆಶ್ಚರ್ಯವೇನು? ಎಲ್ಲರೂ ಪ್ರಶಾಂತರಾಗಿ ಉಪಾಸನೆ ಮುಗಿದ ಬಳಿಕ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಸೇನಾಪತಿ ಬಂದು ಹಿಂದೆ ನಿಂತುದನ್ನು ಶಿವನಾಥನು ಗುರು-ದೇವನಿಗೆ ತಿಳಿಸಿದನು. ಗುರುದೇವನು ಹಿಂದಿರುಗಿ ಸೇನಾಪತಿಯನ್ನು ತಮ್ಮ ಕಡೆಗೆ ಕರೆದರು. ಅವನು ಬಂದು ಭಕ್ತಿಯಿಂದ ನಮಸ್ಕರಿಸಿದನು. ಗುರುದೇವನು ಅವನನ್ನು ಹತ್ತಿರ ಕುಳ್ಳಿರಿಸಿಕೊಂಡು ಕ್ಷೇಮವನ್ನು ವಿಚಾರಿಸಿದರು, ಮತ್ತು ಎಂದರು

"ನೀವು ಬಂದುದು ಒಳಿತಾಯ್ತು, ಸೇನಾಪತೀ; ಎಲ್ಲ ಪರಿಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡಿರಿ."

"ಅಹುದು, ಭಗವನ್, ಪರಿಸ್ಥಿತಿಯನ್ನು ಸ್ಥೂಲವಾಗಿ ಕಂಡೆನು. ತಮ್ಮಿಂದ ಪ್ರೇರಿತರಾದ ಆಶ್ರಮವಾಸಿಗಳು ಬಹು ಮಹತ್ತ್ವದ ಕೆಲಸವನ್ನು ಮಾಡಿರುವರು. ಎಂಟು ದಿನಗಳಲ್ಲಿ ಸ್ಥಿತಿ ಪೂರ್ಣವಾಗಿ ಮಾರ್ಪಟ್ಟಿದೆ. ಎಲ್ಲಕ್ಕೂ ಹೆಚ್ಚಿನ ಮಾತೆಂದರೆ, ಜನರಲ್ಲಿ ಸ್ವಾಭಿಮಾನವೂ ಧೈರ್ಯವೂ ಬಂದಿದೆ. ಹೇಡಿತನವು ಕಷ್ಟವನ್ನು ಹೆಚ್ಚಿಸುವುದೆಂಬ ಅರಿವು ಜನಸಾಮಾನ್ಯ ರಲ್ಲಿ ಉಂಟಾದುದು ಸಾಮಾನ್ಯವಾದ ಮಾತಲ್ಲ. ಜನರು ಸಂಯಮದ ಲಾಭವನ್ನು ಮನಗಂಡಿದ್ದಾರೆ. ಅದರಿಂದ ರಕ್ತಪಾತವಾಗದೆ ಉಪದ್ರವವನ್ನು ತಡೆಯಲು ಶಕ್ಯವಾಯ್ತು. ರುದ್ರನಾಯಕನಂತಹ ಬಲಾಢ್ಯನಾದ ಉಪದ್ರವಿ ಯನ್ನು ವಶಮಾಡಿದ ರೀತಿ ಜನನಾಯಕನ ಬುದ್ಧಿ ಚಾತುರ್ಯವನ್ನು, ಸಾಹಸವನ್ನು, ತ್ಯಾಗವನ್ನು ಮತ್ತು ಆತ್ಮವಿಶ್ವಾಸವನ್ನು ವ್ಯಕ್ತಗೊಳಿಸುತ್ತದೆ. ಆ ವೀರನ ಅದ್ಭುತ ಕಾರ್ಯವನ್ನು ಕಂಡು ಯಾರಿಗೆ ತಾನೇ ಅಂತಃಕರಣವು ಆದರದಿಂದ ತುಂಬಿ ತುಳುಕದು? ಭಗವನ್, ನಾನು ಇಲ್ಲಿಗೆ ಬಂದುದು ತಮ್ಮ ದರ್ಶನದಿಂದ ಪುನೀತನಾಗಬೇಕೆಂದು ಮತ್ತು ತಮ್ಮ ವೀರವರನಾದ ಶಿಷ್ಯನನ್ನು ಕಾಣಬೇಕೆಂದು!"

"ಸರಿ; ನಿಜವಾಗಿಯೂ ಪದ್ಮನಾಭನು ಜರುಗಿಸಿದ ಕಾರ್ಯವು ಅಭಿ ನಂದನೀಯವಾಗಿರುತ್ತದೆ, ಶ್ಲಾಘನೀಯವಾಗಿರುತ್ತದೆ. ಸೇನಾಪತೀ, ನೀವು ರಾಜಧಾನಿಯನ್ನು ಬಿಟ್ಟಾಗಿನಿಂದ ನಿಮಗೆ ವಿಶ್ರಾಂತಿಯಿಲ್ಲ. ಇಂದಿನ ರಾತ್ರಿ ನೀವು ವಿಶ್ರಾಂತಿಗಾಗಿ ಆಶ್ರಮದಲ್ಲಿ ಉಳಿಯಬೇಕೆಂದು ನನ್ನ ಬಿನ್ನಹ. ಇನ್ನು ಅರ್ಧಗಂಟೆಗೆ ಉಪಾಹಾರದ ವೇಳೆ. ಉಪಾಹಾರವಾದ ಬಳಿಕ ಎಲ್ಲ ವೃತ್ತಾಂತವು ನಿಮಗೆ ವಿವರವಾಗಿ ಗೊತ್ತಾಗುವುದು. ಸಾದ್ಯಂತವಾದ ವೃತ್ತಾಂತ ವನ್ನು ಬರೆಯಲು ನಾನು ಪದ್ಮನಾಭನಿಗೆ ಹೇಳಿರುವೆನು. ಇನ್ನೊಂದು ಗಂಟೆ ಯಲ್ಲಿ ಆತನು ಬರೆದು ಮುಗಿಸಬಹುದು. ನೀವು ಅದನ್ನು ಓದುವಿರಂತೆ. ಸೇನಾಪತೀ, ನೀವು ಆಶ್ರಮಕ್ಕೆ ಬಂದುದು ಇದುವೆ ಮೊದಲನೆಯ ಸಲವು. ವಿಜಯಚಂದ್ರ ಮಹಾರಾಜರ ಸೇನಾಪತಿಗೆ ಮೈತುಂಬ ಮಹತ್ತ್ವದ ಕೆಲಸ ಗಳೆಂಬುವನ್ನು ನಾನು ಅರಿಯದೆ ಇಲ್ಲ. ಆದರೆ ಈ ಎಂಟು ದಿನಗಳ ವೃತ್ತಾಂತ ವನ್ನು ಸಾದ್ಯಂತವಾಗಿ ತಿಳಿದುಕೊಳ್ಳುವುದೂ ಒಂದು ಮಹತ್ತ್ವದ ಕೆಲಸವೇ ಅಲ್ಲವೇ? ಸೇನಾಪತೀ, ನನ್ನ ಬಿನ್ನಹವನ್ನು ಕಡೆಗಣಿಸಬಾರದು."

" ಭಗವನ್, ತಮ್ಮ ಆಜ್ಞೆಯ ಹೊರಗೆ ನಾನಿಲ್ಲ."

ಗುರುದೇವನು ಶಿವನಾಥನನ್ನು ಕರೆದು ಅವನಿಗೆ ಸೇನಾಪತಿಯ ಸೇವೆಯಲ್ಲಿ ಇರಲು ಹೇಳಿ ಜಪಕ್ಕೋಸುಗ ತಮ್ಮ ಕೋಣೆಗೆ ಬಂದರು.

---

## ೧೯

ಉಪಾಹಾರವು ಮುಗಿದ ತರುವಾಯ ಗುರುದೇವನು ಸೇನಾಪತಿಯೊಡನೆ ತಮ್ಮ ಕೋಣೆಗೆ ಬಂದು ಮಾತನಾಡುತ್ತ ಕುಳಿತರು. ರುದ್ರನಾಯಕನ ವಿಷಯವು ಹೊರಟಿತು. ಸೇನಾಪತಿ ಎಂದನು, "ಭಗವನ್, ರುದ್ರನಾಯಕನು ಇಲ್ಲಿ ಯಾವ ನಿರ್ಬಂಧವೂ ಇಲ್ಲದೆ ವ್ಯವಹರಿಸುತ್ತಿರುವನಲ್ಲ? ಇಷ್ಟೊಂದು ಸ್ವತಂತ್ರತೆ ಈಗ ಅವನಿಗೆ ಇರುವುದು ಯೋಗ್ಯವಾಗಬಹುದೊ?"

" ತಪ್ಪೇನು, ಸೇನಾಪತೀ ? "

" ಅವನು ಓಡಿಹೋದರೆ ? "

" ಇಲ್ಲಿ ಯಾರಿಗೆ ಮತ್ತು ಏತಕ್ಕೆ ಹೆದರಿ ಅವನು ಓಡಿಹೋಗಬೇಕು? ಹೆದರಿಕೆ ಇದ್ದರಲ್ಲವೆ ಓಡಿಹೋಗುವುದು ? "

" ರಾಜದೂತರ ಕೈಯಲ್ಲಿ ಸಿಕ್ಕುವೆನೆಂಬ ಭಯವು ಅವನಿಗೆ ಇಲ್ಲಿ ಇಲ್ಲವೆ ? "

" ಎಲ್ಲಿಗೆ ಹೋದರೆ ಅವನು ಈ ಭಯದಿಂದ ಮುಕ್ತನಾಗಬಲ್ಲನು ? "

" ಎಲ್ಲಿಯಾದರೂ ಅಡಗಿಕೊಂಡು ಇದ್ದರೆ? "

" ಭಯಗ್ರಸ್ತನು ಅಡಿಗಿಕೊಂಡಿದ್ದರೆ ನಿರ್ಭಯನಾಗುವನೆ? ಅಡಗಿರಲು ಎಷ್ಟೆಷ್ಟು ಪ್ರಯತ್ನವು ಹೆಚ್ಚುವುದೊ ಅಷ್ಟಷ್ಟು ಭೀತಿ ಹೆಚ್ಚುವುದೆಂಬುದು ನಮ್ಮೆಲ್ಲರ ಅನುಭವವಲ್ಲವೆ ? "

" ತಾವು ಈಗ ಹೇಳಿದುದು ಅನುಭವಕ್ಕೆ ವಿರುದ್ಧವಾದ ಮಾತಲ್ಲ. ಭಗವನ್."

" ಸೇನಾಪತಿ, ಭೀತಿ ಪಾಪಿಮನಸ್ಸಿಗೆ ಸ್ವಾಭಾವಿಕವು. ಎಲ್ಲಿ ಹೋದರೂ ಭೀತಿ ಪಾಪಿಮನಸ್ಸಿಗೆ ಅಂಟಿಕೊಂಡೇ ಇರುವುದು. ಕಗ್ಗತ್ತಲೆಯ ಗವಿಯಲ್ಲಿ ಅವಿತಿದ್ದರೂ ಗಾಳಿಯ ಉಸಿರು ಕೂಡ ಆ ಪಾಪಿ ಮನಸ್ಸನ್ನು

ನಡುಗಿಸದೆ ಇರದು. ನಿರ್ಭಯತೆ ನಿರ್ಮಲ ಮನದ ಸ್ವತ್ತು! ಈ ಮಾತನ್ನು ರುದ್ರನಾಯಕನು ಮನಗಂಡಿರುವನು. ಅವನು ಈಗ ನಿರ್ಭಯನಾಗಿರಲು ಮನಃಪೂರ್ವಕವಾಗಿ ಯತ್ನಿಸುತ್ತಿರುವನು."

"ಯತ್ನಿಸುತ್ತಿರಬಹುದು. ಆದರೆ—"

"ಆದರೆ ಏನು, ಸೇನಾಪತೀ?"

"ಇನ್ನು ಮುಂದಾದರೂ ಅವನಿಂದ ಜನರಿಗೆ ಗಂಡಾಂತರವು ಒದಗಬಾರದೆಂದು ಅವನು ಬಂಧನದಲ್ಲಿ ಇರುವುದು ಅಯೋಗ್ಯವಲ್ಲವಷ್ಟೇ. ಅವನು ಮಹಾಪರಾಧಿ, ಅವನು ಸಮಾಜಕಂಟಕನು! ಸಮಾಜವು ಸುರಕ್ಷಿತವಾಗಿರಬೇಕೆಂದು ಅವನು ಬಂಧನದಲ್ಲಿ ಇರುವುದು ಯೋಗ್ಯವು."

"ಸಮಾಜವು ಸುರಕ್ಷಿತವಾಗಿರಬೇಕೆಂಬುದು ಸರಿಯಾದ ಮಾತು. ಸಮಾಜವು ಸುರಕ್ಷಿತವಾಗಿರಬೇಕು, ಬದುಕಬೇಕು ಮತ್ತು ಬೆಳೆಯಬೇಕು. ಆದರೆ ಸಮಾಜವು ಆದುದು ವ್ಯಕ್ತಿಗಳಿಂದಲೇ ಅಲ್ಲವೆ?"

"ಅಹುದು, ತಾವು ಎಂಬುದು ನಿಜವು."

"ಹಾಗಾದರೆ, ರುದ್ರನಾಯಕನೂ ಒಂದು ವ್ಯಕ್ತಿ. ಅವನೂ ಬದುಕಬೇಕು ಮತ್ತು ಬೆಳೆಯಬೇಕು."

"ಆದರೆ, ಅವನೊಂದು ದುಷ್ಟ ವ್ಯಕ್ತಿ."

"ಆದರೆ ಶುಭದ ಅಂಶವು ಅವನಲ್ಲಿ ಇಲ್ಲವೆ? ಇಲ್ಲದಾಗಿದ್ದರೆ ಪದ್ಮನಾಭನ ಸಾತ್ತ್ವಿಕತೆಗೆ ಅವನು ಸೋಲುತ್ತಿದ್ದನೆ? ಸುಪ್ತವಾಗಿದ್ದ ಅವನ ಶುಭಾಂಶವು ಪದ್ಮನಾಭನ ಸಾತ್ತ್ವಿಕತೆಯ ತೇಜದಿಂದ ಜಾಗೃತವಾಯ್ತು. ಜಾಗೃತವಾದ ಶುಭಶಕ್ತಿ ತನ್ನ ಸುತ್ತಲು ದುಷ್ಟಶಕ್ತಿಗಳು ಹಬ್ಬಿಸಿರುವ ಬಂಧಸ್ಥಗಳನ್ನು ಹರಿದೊಗೆಯಲು ಯತ್ನಿಸುತ್ತಿರುವಾಗ ಆ ಶಕ್ತಿಯ ವಿಕಾಸಕೆ ಆಸ್ಪದಗಳನ್ನು ಒದಗಿಸುವುದು ನಮ್ಮ ಕರ್ತವ್ಯವು. ರುದ್ರನಾಯಕನು ದುಷ್ಟಶಕ್ತಿಗಳನ್ನು ನಿರ್ಮೂಲಗೊಳಿಸಲು ಪ್ರಯತ್ನಿಸುತ್ತಿರುವನು. ಅವನಿಗೆ ಈಗ ಮೈ ತುಂಬ ಕಣ್ಣುಗಳು. ತನ್ನಲ್ಲಿಯ ಶುಭಾಂಶದ, ಸತ್-ಶಕ್ತಿಯ ಅರಿವು ಅವನಿಗಾಗಿದೆ. ಅದರ ಮಹತ್ತ್ವವನ್ನು, ಅದರ ಪ್ರಭಾವವನ್ನು ಅವನು ತಿಳಿದಿರುವನು. ಈಗ ಅವನಿಗೆ ಸಹಾನುಭೂತಿಯ ಆವಶ್ಯಕತೆ ಇದೆ,

ಸಾಹಾಯ್ಯದ ಅವಶ್ಯಕತೆ ಇದೆ. ಸಹಾನುಭೂತಿ ಮತ್ತು ಸಾಹಾಯ್ಯವು ಸಕಾಲದಲ್ಲಿ ದೊರೆಯದಿದ್ದರೆ ವ್ಯಕ್ತಿಗೆ ಏಳ್ಗೆಯ ಆಶೆಯಿಲ್ಲ. ಸೇನಾಪತೀ, ನಿಮ್ಮ ಜೀವನವನ್ನು ಪರೀಕ್ಷಿಸಿಕೊಳ್ಳಿರಿ. ರುದ್ರನಾಯಕನನ್ನು ಮಹಾಪರಾಧಿ-ಯೆಂದು ತಿರಸ್ಕರಿಸಬೇಡಿರಿ. ಪರಿಶುದ್ಧನಾಗಲು ಹಂಬಲಿಸುವ ಮತ್ತು ಪ್ರಯತ್ನಿಸುವ ಮನುಷ್ಯನು ತಿರಸ್ಕಾರಕ್ಕೆ ಯೋಗ್ಯನಲ್ಲ. ನಿಮ್ಮಲ್ಲಿಯ ಶುಭಾಂಶವನ್ನು ಕಂಡು ನಿಮ್ಮ ಸತ್‌ಶಕ್ತಿಯನ್ನು ವೃದ್ಧಿಗೊಳಿಸಲು ಮಹಾರಾಜರು ಮನಸ್ಸು ಮಾಡದೆ ಇರುತ್ತಿದ್ದರೆ ಮತ್ತು ಅವರ ಸಾಹಾಯ್ಯವು ಇರಲಿಲ್ಲವಾಗಿದ್ದರೆ ನಿಮ್ಮ ಸ್ಥಿತಿ ಏನಾಗುತ್ತಿದ್ದಿತು ? ನಿರುಪದ್ರವಿಗಳನ್ನು ಪೀಡಿಸಿದನೆಂದು ರುದ್ರನಾಯಕನು ಸಮಾಜಕಂಟಕನಲ್ಲವೆ ? ಆದರೆ ನಿರುಪದ್ರವಿಯಾದ ಎಳೆ ಮಗುವನ್ನು ಕೊಲ್ಲಿಸಲು ಪ್ರಯತ್ನಿಸಿದ ನೀವು ? ಆ ಮಗುವೆ ಇಂದು ನೀವು ಬಾಯ್ತುಂಬಿ ಹೊಗಳುವ ಪದ್ಮನಾಭ ! ಅಹುದು, ಆತನೇ ಈತನು ! ಎಂತಹ ಜೀವವನ್ನು ನೀವು ಅಂದು ಮಣ್ಣುಗೂಡಿಸುತ್ತಿದ್ದಿರಲ್ಲ ! ಆತನು ಬಡವರ ಹೊಟ್ಟೆಯಲ್ಲಿ ಬಂದುದು ನಿಮ್ಮ ದೃಷ್ಟಿಯಲ್ಲಿ ತಪ್ಪಾಯ್ತಲ್ಲವೆ ? ಎಂತಹ ವಿಕೃತ ದೃಷ್ಟಿ ಅದು ! ಆದರೂ, ಸೇನಾಪತೀ, ಅಂದು ನಿಮ್ಮಲ್ಲಿ ನಾನು ಶುಭಾಂಶವೊಂದನ್ನು ಕಂಡೆನು. ನಿಮ್ಮ ವಿಷಯದಲ್ಲಿ ಸಹಾನುಭೂತಿಯುಳ್ಳವನಾದೆನು. ಆ ಶುಭಾಂಶದ ಪ್ರಭಾವದಿಂದ ನೀವು ಇಂದು ಮಹಾರಾಜರ ಬಲಗೈ ಆಗಿರುವಿರಿ ಇನ್ನೊಬ್ಬರಲ್ಲಿ ಶುಭಾಂಶಗಳನ್ನು ಕಾಣುವ ದೃಷ್ಟಿ ನಮ್ಮದಿರಬೇಕು. ಶುಭದ ವಿಕಾಸಕ್ಕೆ ಸೌಕರ್ಯಗಳನ್ನು ಒದಗಿಸುವ ಕಾರ್ಯವು ನಮ್ಮದಾಗಿರಬೇಕು. ಸಮಾಜವು ಸುರಕ್ಷಿತವಾಗಿರುವುದು ಇದ-ರಿಂದ ಅದು ಬದುಕುವುದಾಗಲಿ ಬೆಳೆವುದಾಗಲಿ ಇದರಿಂದ. ಸಮಾಜಕಂಟಕರೆಂದು ವ್ಯಕ್ತಿಗಳನ್ನು ನಿರ್ನಾಮಗೊಳಿಸುವುದರಿಂದ ಸಮಾಜಹಾನಿ ನಿಶ್ಚಿತವು! ಈ ಮಾತನ್ನು ಜಗತ್ತು ಬೇಗನೆ ಅರಿತಷ್ಟು ಕ್ಷೇಮವು. ಇದನ್ನು ಅರಿಯದೆ ಕಾರ್ಯಪ್ರವೃತ್ತರಾದ ಸಮಾಜ ರಕ್ಷಕರೆಂಬವರಿಂದ ಸಮಾಜಕ್ಕೆ ಲಾಭವಾದೀತೆಂಬ ಮಾತು ಮುಗಿಲ ಹೂವೇ ಸೈ. ಸೇನಾಪತೀ, ಇಂದು ನೀವು ಆಶ್ರಮದ ಅತಿಥಿ ನಿಮಗೆ ಆನಂದವನ್ನು ಒದಗಿಸುವುದು ನಮ್ಮ ಕರ್ತವ್ಯವು. ಮಹಾ-ರಾಜರ ಪ್ರಯತ್ನದಿಂದ ಸಾತ್ತ್ವಿಕತೆಯ ಆನಂದವನ್ನು ಪಡೆಯಲು ಅರ್ಹರಾಗಿದ್ದೀರಿ. ನನ್ನ ಸ್ಪಷ್ಟೋಕ್ತಿಯನ್ನು ನೀವು ಸರಿಯಾದ ಅರ್ಥದಲ್ಲಿ ಗ್ರಹಿಸುವಿ

ರೆಂದು ನನ್ನ ವಿಶ್ವಾಸವಿದೆ. ಮಹಾರಾಜರ ಪ್ರಯತ್ನಕ್ಕೆ ಪುಷ್ಟಿಯೀವುದೇ ನನ್ನ ಉದ್ದೇಶವು. ನೀವು ನನ್ನನ್ನು ನಿಮ್ಮ ಬಂಧುವೆಂದು ಗ್ರಹಿಸಬೇಕು."

ಸೇನಾಪತಿಯ ಹೃದಯವು ತಿಳಿಯಾಯ್ತು. ಸಾತ್ತ್ವಿಕ ಆನಂದದ ಸವಿಯ ಅನುಭವವು ಅವನಿಗಾಯ್ತು. ಗುರುದೇವನ ಮಹಾನುಭಾವನೆಯ ಪ್ರಕಾಶದಲ್ಲಿ ಸತ್ಯದ ಗೂಢವನ್ನು ಅವನು ಕಂಡನು. ಅವರ ಕ್ಷಮಾಗುಣಕ್ಕೆ ಅವನು ಬೆರಗಾದನು. ತನ್ನ ಚರಿತ್ರವನ್ನು ಸಂಪೂರ್ಣವಾಗಿ ಬಲ್ಲ ಅವರು ತನ್ನನ್ನು ತಮ್ಮ ಬಂಧುವಾಗಿ ಭಾವಿಸಿದುದನ್ನು ಕಂಡು ಅವನ ಅಂತಃಕರಣವು ಕೃತಜ್ಞತೆಯಿಂದ ತುಂಬಿತು. ಸಗದ್ಗದ ಕಂಠದಿಂದ ಅವನು ಎಂದನು, " ಭಗವನ್, ತಮ್ಮ ಚರಣಗಳ ಆಶ್ರಯವು ಇನ್ನು ಮುಂದೆ ನನಗೆ ನಿರಂತ-ರವೂ ಇರುವುದೆಂದು ನನಗೆ ತಮ್ಮ ಆಶ್ವಾಸನವು ಬೇಕು ! "

" ಸೇನಾಪತೀ, ನೀವು ನನ್ನ ಬಂಧು ! "

ಗುರುದೇವನ ಆಶ್ವಾಸನವನ್ನು ಸೇನಾಪತಿ ಭಕ್ತಿನಮ್ರನಾಗಿ ಸ್ವೀಕರಿಸಿ-ದನು.

ಗುರುದೇವನು ಮತ್ತೆ ಎಂದರು, "ಬೀರನಾಯಕನು ಪದ್ಮನಾಭನನ್ನು ಆತನ ತಂದೆ-ತಾಯಿಗಳಿಂದ ಅಗಲಿಸಿ, ಮರುದಿನ ಕಾಲಿಂಗನ ಕೈಯಲ್ಲಿ ಕೊಲ್ಲಲು ಕೊಟ್ಟು ಹೋದ ಸಮಯದಿಂದ ಆತನ ಪಾಲನಕಾರ್ಯವು ನನಗೆ ಬಂದಿತು. ಭಗವತ್-ಕೃಪೆಯಿಂದ ಆತನು ಬೆಳೆದು ದೊಡ್ಡವನಾಗಿದ್ದಾನೆ, ಇಂದು ಆತನು ನಿಮ್ಮ ಪ್ರಶಂಸೆಗೆ ಪಾತ್ರವಾಗಿದ್ದಾನೆ. ದೇವನ ದಯೆ ಇದ್ದಿತು, ಶಿಶುಹತ್ಯೆ ಘಟಿಸಲಿಲ್ಲ. ನಿಷ್ಪಾಪನಾದ ಕಾಲಿಂಗನ ನೆರವು ನನಗೆ ಇಲ್ಲದಾಗಿ-ದ್ದರೆ ಏನಾಗುತ್ತಿದ್ದಿತೋ ಪರಮೇಶ್ವರನಿಗೇ ಗೊತ್ತು. ಕಾಲಿಂಗನ ಹೆಂಡತಿ ಲಕ್ಷ್ಮಿ—ಅವರ ಮಗುವೂ ಸತ್ತು ಎಂಟು ದಿನಗಳಾಗಿದ್ದುವು—ಪದ್ಮನಾಭನಿಗೆ ಮೊಲೆಯುಣಿಸಿ ಆತನನ್ನು ಬೆಳೆಯಿಸಿದಳು. ಪಶ್ಚಾತ್ತಾಪದಿಂದ–ತೀವ್ರವಾದ ಪಶ್ಚಾತ್ತಾಪದಿಂದ ಶುದ್ಧನಾದ ಬೀರನಾಯಕನು ಹೆಂಡತಿ ಮಕ್ಕಳೊಡನೆ ಆದರ್ಶ ಸಂಸಾರಿಕನಾಗಿದ್ದಾನೆ. ಕಾಲಿಂಗನದೂ ಚಿಕ್ಕದಾದ ಸಂಸಾರವಿದೆ. ಆಶ್ರಮದ ಕಾರ್ಯಗಳು ಪದ್ಮನಾಭನ ತಂದೆತಾಯಿಗಳ ಕಾರ್ಯಕ್ಷಮತೆಯಿಂದ ನಿರಾತಂಕವಾಗಿ ಸಾಗಿವೆ. ವೀರನೂ ಉದಾತ್ತನೂ ಬುದ್ಧಿಶಾಲಿಯೂ ಆದ ಪದ್ಮ ನಾಭನು ಕರ್ತವ್ಯತತ್ಪರನಾಗಿ ಎಲ್ಲರ ಹೃದಯವನ್ನು ಸೆಳೆದಿರುವನೆಂಬುದು

ನಿಮ್ಮ ಲಕ್ಷ್ಯದಲ್ಲಿ ಬಾರದೆ ಇಲ್ಲ. ಸೇನಾಪತೀ, ನೀವು ಆತನಿಗೆ ಬಗೆದಿದ್ದ ಅಪಕೃತ್ಯವನ್ನು ಆತನು ಅರಿಯದೆ ಇಲ್ಲ. ಆದರೆ ನಿಮ್ಮಲ್ಲಿಯ ಶುಭಾಂಶಗಳನ್ನೂ ಆತನು ಅರಿಯದೆ ಇಲ್ಲ. ಅಜಾತಶತ್ರುವಾದ ಆತನಿಗೆ ನಿಮ್ಮ ವಿಷಯದಲ್ಲಿ ಆದರವುಂಟು. ದ್ವೇಷವು ಆತನನ್ನು ಸೋಂಕದು. ಪ್ರೇಮದಿಂದ ದ್ವೇಷವನ್ನು ಗೆಲ್ಲುವುದು ಆತನ ನಿತ್ಯಧ್ಯೇಯವಾಗಿರುವುದು. "

" ಭಗವನ್, ಆತನು ಒಂದು ರತ್ನವು ! "

" ಬಡವರಲ್ಲಿ ಹುಟ್ಟಿದುದೆಂದು ಆ ರತ್ನವು ತ್ಯಾಜ್ಯವಲ್ಲವಷ್ಟೇ ? "

" ಭಗವನ್, ಬಡವರ ವಿಷಯದಲ್ಲಿ ನನ್ನ ದೃಷ್ಟಿ ವಿಕೃತವಾಗಿದ್ದಿತು. ಮಹಾರಾಜರ ಕೃಪೆಯಿಂದ ವಿಕಾರವು ನಷ್ಟವಾಯ್ತು—"

ಬಾಗಿಲನ್ನು ತಟ್ಟಿದ ಶಬ್ದವಾಯ್ತು. "ಬರಬಹುದು," ಗುರುದೇವನು ನುಡಿದರು. ಪದ್ಮನಾಭನು ಒಳಗೆ ಬಂದು ತಾನು ಬರೆದ ವೃತ್ತಾಂತವನ್ನು ಗುರುದೇವನ ಮುಂದೆ ಇಟ್ಟು ನಿಂತುಕೊಂಡನು. "ಪದ್ಮನಾಭಾ, ಸೇನಾಪತಿಗೆ ನಮಸ್ಕಾರಮಾಡು," ಗುರುದೇವನು ಎಂದರು. ಆತನು ನಮಸ್ಕಾರ ಮಾಡಿದನು. "ಚಿರಂಜೀವಿಯಾಗು, ಕುಮಾರಾ," ಸೇನಾಪತಿ ಆಶೀರ್ವದಿಸಿದನು, ಮತ್ತು ಎಂದನು, "ನನ್ನನ್ನು ಕ್ಷಮಿಸುವೆಯಾ ? "

" ಸೇನಾಪತೀ, ನೀವು ನನ್ನನ್ನು ಪ್ರೇಮದಿಂದ ಹರಿಸಿದಿರಿ, ನಾನು ಆದರದಿಂದ ನಿಮ್ಮ ಹರಕೆಯನ್ನು ಸ್ವೀಕರಿಸಿದೆನು ಇತ್ತ ಪ್ರೇಮ ಇತ್ತ ಆದರ. ಕ್ಷಮಾಯಾಚನೆಗೆ ಅವಕಾಶವೇ ಇಲ್ಲ. ನೀವು ನನ್ನ ಹಿತೈಷಿ. "

" ಅಹುದು, ಕುಮಾರಾ, ನೀನೆಂಬುದು ನಿಜವು. ಆದರೆ ನನ್ನ ಅಂದಿನ ಅಪಕೃತ್ಯವು ನನ್ನ ಹೃದಯದಲ್ಲಿ ಛಿದ್ರವನ್ನು ಕೊರೆದಿದೆ. ವೇದನೆ ದುಃಸಹ್ಯವಾಗಿದೆ. ನಿನ್ನ ಕ್ಷಮೆಯಿಂದಲ್ಲದೆ ಬೇರೆ ಏತರಿಂದಲೂ ಗಾಯವು ಮಾಯದು. ಕ್ಷಮಿಸುವೆಯಾ ? ಆದರೆ ಅಕ್ಷಮ್ಯವಾದ ಅಪರಾಧಕ್ಕೆ ಕ್ಷಮೆ ಇರುವುದೆಲ್ಲಿ ? "

" ಸರ್ವಸಾಕ್ಷಿಯೂ ದಯಾನಿಧಿಯೂ ಆದ ಪರಮೇಶ್ವರನು ಮಾನವನಿಂದ ಅಕ್ಷಮ್ಯವಾದ ಅಪರಾಧವನ್ನು ಮಾಡಿಸಿ ಅವನನ್ನು ಗೋಳಿಗಿಕ್ಕಿ ತಾನು ನೋಡುತ್ತ ಆನಂದಪಡುವನೆ? ಕ್ಷಮೆಯಿಲ್ಲದ ಅಪರಾಧವಿರದು ! ಪಶ್ಚಾತ್ತಾಪವೇ ದೇವನ ಕ್ಷಮೆ ಕ್ಷಮಿಸಲು ನಾನೆಷ್ಟರವನು ? ದೇವನು ನಿಮಗೆ ಕ್ಷಮೆ ದೋರಿರುವುದನ್ನು ನಾನು ಪ್ರತ್ಯಕ್ಷವಾಗಿ ನೋಡುತ್ತಿರುವೆದು, ಸೇನಾಪತೀ,

ಕ್ಷಮಿಸುವ ಅಧಿಕಾರವು ದೇವನದು. ಕ್ಷಮೆಯ ಫಲವನ್ನು ಉಣ್ಣುವ ಭಾಗ್ಯವು ನಮ್ಮದು. ಪಶ್ಚಾತ್ತಾಪದಿಂದ ಪುನೀತರಾದುದು ನಿಮಗೆ ದೊರೆತ ಫಲವು, ನಿಮ್ಮ ಆಶೀರ್ವಾದವನ್ನು ಪಡೆದುದು ನನಗೆ ದೊರೆತ ಫಲವು. ಗುರುದೇವನು ಇದಕ್ಕೆ ಸಾಕ್ಷಿಯಾಗಿರುವರು."

"ಕುಮಾರಾ, ನನ್ನ ಬದುಕಿಗೆ ನೀನು ಬೆಳಕನಿತ್ತೆ! ಎದೆಯನ್ನು ಮೀಟುತ್ತಿದ್ದ ಮುಳ್ಳನ್ನು ಹಿರಿದು ಹೊರದೆಗೆದೆ. ತೇಜೋಮಯವಾದ ನಿನ್ನ ಜೀವನದಿಂದ ಜಗತ್ತು ಬೆಳಕುಗಾಣಲಿ. ಧನ್ಯರು ಗುರುದೇವನು! ಅವರ ಪ್ರಸಾದದಿಂದ ತೇಜಃಪುಂಜ ರತ್ನವು ಜಗತ್ತಿಗೆ ದೊರೆತಿತು!"

"ಸೇನಾಪತೀ," ಗುರುದೇವನು ಎಂದರು, "ನಿಜವಾಗಿಯೂ ಇಂದು ನಾನು ಧನ್ಯನು ಪಿತಾಪುತ್ರರಂತೆ ನೀವು ಒಂದಾಗಿರುವುದನ್ನು ನೋಡುವ ಸೌಭಾಗ್ಯವನ್ನು ಕರುಣಾಘನನಾದ ಪರಮಾತ್ಮನು ನನಗೆ ಒದಗಿಸಿದನು! ಇಂದಿನಿಂದ ಈ ವಸ್ತು ಹೇಗೆ ನನ್ನದೊ ಹಾಗೆ ನಿಮ್ಮದೂ ಆಗಿರುವುದೆಂದು ನಾನು ತಿಳಿಯುತ್ತೇನೆ."

"ಭಗವನ್, ನಾನು ಕೃತಾರ್ಥನಾದೆನು," ಸೇನಾಪತಿ ಬಾಷ್ಪಾಕುಲನಾಗಿ ನುಡಿದನು, "ತಾವು ಮಕ್ಕಳಿಲ್ಲದ ನನಗೆ ಇಂದು ಮಗನನ್ನು ಕೊಟ್ಟಿರಿ! 'ಕುಮಾರಾ,' ಎಂದು ಈತನನ್ನು ನಾನು ಸಂಬೋಧಿಸಿದುದು ಸಾರ್ಥವಾಯ್ತು."

"ಸೇನಾಪತೀ, ಪದ್ಮನಾಭನು ಬರೆದು ತಂದ ವೃತ್ತಾಂತವನ್ನು ನೀವು ನಾಳೆ ಓದಬಹುದು. ರಾತ್ರಿ ಬಹಳವಾಯ್ತು. ಮಗು, ಸೇನಾಪತಿ ವಿಶ್ರಾಂತಿ ಪಡೆಯಲಿ. ಅವರನ್ನು ಅತಿಥಿ ಶಾಲೆಗೆ ಕರಕೊಂಡು ಹೋಗು."

ಸೇನಾಪತಿಯೂ ಪದ್ಮನಾಭನೂ ಗುರುದೇವನನ್ನು ವಂದಿಸಿ ಅತಿಥಿ ಶಾಲೆಯ ಕಡೆಗೆ ಹೋದರು.

---

## ೨೦

ಮರುದಿನ ಬೆಳಗಿನಲ್ಲಿ ಗುರುದೇವನು ಪ್ರಾತಃಕರ್ಮವನ್ನು ತೀರಿಸಿ ತಮ್ಮ ಕೋಣೆಯಲ್ಲಿ ಕುಳಿತಿದ್ದರು. ದೇವದತ್ತನು ಬಂದು ತಾನು ಬರೆದ

ಅಣ್ಣನ ಚಿತ್ರವನ್ನು ಅವರ ಮುಂದೆ ಇರಿಸಿ ಅಲ್ಲಿಯೆ ನಿಂತಿದ್ದನು. ಗುರುದೇವನ ಮುಖವು ಪ್ರಸನ್ನವಾಗಿತ್ತು, ಅವರು ಎಂದರು, "ದೇವದತ್ತಾ, ನೀನು ನಿನ್ನ ಅಣ್ಣನ ಚಿತ್ರದಲ್ಲಿ ನಿನ್ನ ಅಂತಃಕರಣವನ್ನೆ ಮೂಡಿಸಿರುವೆಯಲ್ಲ! ಆತನಲ್ಲಿ ನಿನಗಿರುವ ಭಕ್ತಿ ಅದ್ಭುತವಾಗಿರುವುದು. ನಿಜವಾಗಿಯೂ ಈ ಬಗೆಯ ಭಕ್ತಿಗೆ ಆತನು ಅರ್ಹನಿರುವನು. ಈ ಚಿತ್ರವನ್ನು ನೀನು ಬರೆದಿಲ್ಲ, ನಿನ್ನ ನಿರ್ಮಲವಾದ ಭಕ್ತಿ ಬರೆದಿದೆ! ಮಗು, ನಿಮ್ಮ ಅನ್ಯೋನ್ಯ ಪ್ರೇಮವು ಸಂಸಾರದಿಂದ ಅಲಿಪ್ತನಾದ ನನ್ನನ್ನು ಸೆರೆಗೊಂಡಿದೆ." ಹೀಗೆನ್ನುತ್ತಿರುವಾಗ ಶಿವನಾಥನು ಬಂದು, "ಭಗವನ್, ಸೇನಾಪತಿ ತಮ್ಮನ್ನು ಕಾಣಲು ಅಪೇಕ್ಷಿಸುತ್ತಾರೆ," ಎಂದು ಹೇಳಿದನು. ಗುರುದೇವನು, "ಅವರನ್ನು ಕರೆದು-ಕೊಂಡು ಬಾ," ಎಂದು ನುಡಿದರು. ದೇವದತ್ತನು ತನ್ನ ಕೆಲಸಕ್ಕೆ ಹೋದನು.

ಸೇನಾಪತಿ ಬಂದು ಗುರುದೇವನನ್ನು ಭಕ್ತಿಯಿಂದ ನಮಸ್ಕರಿಸಿದನು. ಗುರುದೇವನು ಅವನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು, "ರಾತ್ರಿ ನಿದ್ರೆ ಸರಿಯಾಯ್ತೆ, ಸೇನಾಪತೀ?" ಎಂದರು.

"ಭಗವನ್, ಎದೆಯಲ್ಲಿ ಅಳುಕುತ್ತಿರುವ ಮುಳ್ಳು ತಮ್ಮ ಕೃಪೆಯಿಂದ ಹೊರಗೆ ಬಂದುದರಿಂದ ಸುಖನಿದ್ರೆಯೆಂಬುದನ್ನು ನಿನ್ನೆಯೆ ಕಂಡೆನು. ಆಶ್ರ-ಮದ ಪ್ರಶಾಂತವಾದ ವಾತಾವರಣದಲ್ಲಿ ನನ್ನ ಮನಸ್ಸು ಪ್ರಸನ್ನವಾಗಿದೆ. ಮನೋಸ್ಥೈರ್ಯದ ಸೌಭಾಗ್ಯವನ್ನು ಅನುಭವಿಸುತ್ತಲಿದ್ದೇನೆ. ಭಗವನ್, ಅಂದು ತನ್ನ ತಾಯಿಯ ತೊಡೆಯ ಮೇಲಿದ್ದ ಕುಮಾರನನ್ನು ಹರಸಿದವರು ತಾವೇ ಎಂದು ಸತ್ಯೇಂದ್ರನಿಂದ ಇಂದು ಬೆಳಗಿನಲ್ಲಿ ನನಗೆ ಗೊತ್ತಾಯ್ತು. ತಮ್ಮ ಆಶೀರ್ವಾದವನ್ನು ಅಯಥಾರ್ಥವಾಗಿಸಲು ನಾನು ಏನೇನೋ ಹಂಚಿಕೆಗಳನ್ನು ಮಾಡಿದೆನು. ಆದರೆ ತಮ್ಮ ತಪಃಪ್ರಭಾವವು ಅನರ್ಥವನ್ನು ತಪ್ಪಿಸಿತು, ನಮ್ಮೆಲ್ಲರನ್ನು ಬದುಕಿಸಿತು, ಮತ್ತು ಧೀರೋದಾತ್ತ ವೀರನ ನಿರ್ಮಲ ಹೃದಯದ ಸೌಂದರ್ಯವನ್ನು ಕಣ್ಣಾರೆ ನೋಡುವ ಸೌಭಾಗ್ಯವನ್ನು ನನಗೆ ಒದಗಿಸಿತು. ತಪೋಮಹಿಮರ ಆಶೀರ್ವಾದವು ಅಮೋಘವು. ಭಗವನ್, ಒಂದು ಮಾತನ್ನು ಕೇಳಲಾ?"

"ಸಂಕೋಚವೇಕೆ, ಸೇನಾಪತೀ?"

" ತಮ್ಮ ಆಶೀರ್ವಾದವು ಪೂರ್ಣವಾಗಿ ಫಲಿಸಲು ಸಮಯವು ಬಂದಿರುವುದಲ್ಲವೆ ? "

"ನಿಮ್ಮ ಪ್ರಶ್ನೆಯ ಭಾವವು ನನಗೆ ಗೊತ್ತಾಯ್ತು, ಸೇನಾಪತೀ. ಪದ್ಮನಾಭನು ರಾಜಪುತ್ರಿಯ ಪತಿಯಾಗಲು ಸರ್ವಥಾ ಯೋಗ್ಯನು. ಪ್ರಜಾವತ್ಸಲನಾದ ರಾಜನ ಎಲ್ಲ ಗುಣಗಳು ಆತನಲ್ಲಿ ಇರುತ್ತದೆ. ಆದರೆ ಆತನು ರಾಜ ಪುತ್ರನಲ್ಲ; ಆತನು ಬಡವರ ಮಗನು. ಗುಣಪ್ರಿಯರಾದ ಮಹಾರಾಜರು ಬಡವನೆಂದು ಗುಣವಂತನನ್ನು ಕಡೆಗಣಿಸರೆಂಬುದನ್ನು ನಾನು ಬಲ್ಲೆನು. ರಾಜ ಪುತ್ರಿಯ ಮನಸ್ಸು ತಂದೆಯಂತೆಯೆ ಇದ್ದುದಾದರೆ ನನ್ನ ಮನೋರಥವು— ಆದರೆ ನಿಮ್ಮ ಅಭಿಪ್ರಾಯವು ಅನುಕೂಲವಿರುವುದಷ್ಟೇ ? "

" ಭಗವನ್, ನನ್ನ ಅಂತಃಕರಣದಲ್ಲಿ ಇದ್ದುದನ್ನು ಶಬ್ದಗಳಿಂದ ವ್ಯಕ್ತ ಗೊಳಿಸಲೇಬೇಕೇನು ? ಅದನ್ನು ಅರಿಯಲು ತಮ್ಮ ಪುಣ್ಯ ದೃಷ್ಟಿ ಸಮರ್ಥ ವಿರುವುದು. ಈ ಸಂಬಂಧವು ನನಗೆ ಇಷ್ಟವು. ಮಹಾರಾಜರಿಗೂ ಇಷ್ಟವಾಗದೆ ಇರದು."

" ರಾಜಪುತ್ರಿಗೆ ? "

" ರಾಜಪುತ್ರಿಯ ಹೃದಯವನ್ನು ನಾನು ಸಂಪೂರ್ಣವಾಗಿ ಬಲ್ಲೆನು. ಅವರು ನನ್ನನ್ನು ಚಿಕ್ಕತಂದೆಯ ಸ್ಥಾನದಲ್ಲಿ ಇಟ್ಟುಕೊಂಡಿರುವರು. ಅವರಿಗೆ ಬೇಕಾದುದು ಗುಣಸಂಪತ್ತು. ಜಗತ್ತು ಬಾಳಿದ್ದುದು ಗುಣವಂತರ ಗುಣ ಸಂಪತ್ತಿನಿಂದ ಎಂದು ನಂಬಿದ ರಾಜಪುತ್ರಿ ಗುಣನಿಧಿಯನ್ನು ಪಡೆವ ಸೌಭಾಗ್ಯ ವನ್ನು ಬೇಡುತ್ತಿರುವರು. ನಮ್ಮ ರಾಜಪುತ್ರಿ ಸೌಂದರ್ಯನಿಧಿ, ಬುದ್ಧಿಮತಿ, ಶೀಲಸಂಪನ್ನೆ. ಭಗವನ್, ತಮ್ಮ ಆಶೀರ್ವಾದವು ಬೇಗನೆ ಫಲಿಸುವಂತೆ ಮಾಡಬೇಕೆಂದು ಬೇಡುತ್ತೇನೆ. "

" ಹಾಗಾದರೆ, ಸೇನಾಪತೀ, ಮಹಾರಾಜರಿಗೆ ಪತ್ರಬರೆದು ಅವರ ಅಭಿಪ್ರಾಯವನ್ನು ತಿಳಿದುಕೊಳ್ಳಿರಿ. "

" ಕುಮಾರನ ಈ ಚಿತ್ರವನ್ನು ಮತ್ತು ಆತನು ಬರೆದ ವೃತ್ತಾಂತವನ್ನು ಮಹಾರಾಜರ ಕಡೆಗೆ ನಾನು ಕಳಿಸಬಹುದಲ್ಲವೆ ? "

" ಕಳಿಸಬಹುದು. "

" ಕುಮಾರನ ಅಭಿಪ್ರಾಯವನ್ನು ನಾನು ತಿಳಿಯಬಹುದೆ ? "

" ಈ ಸಂಬಂಧವು ನಮಗೆ ಇಷ್ಟವೆನಿಸುವಂತೆ ಮಹಾರಾಜರಿಗೂ ಇಷ್ಟ ವೆನಿಸಿದರೆ, ನಮ್ಮದು ಅರ್ಧ ಕೆಲಸವಾಯ್ತು. ಉಳಿದ ಅರ್ಧವನ್ನು ವಧೂ-ವರರಿಗೆ ಬಿಡುವುದು ಒಳಿತು. ಮದುವೆಯೆಂಬುದು ಪರಸ್ಪರಾನುರಾಗದ ಮಾತು. ಹಿರಿಯರ ಅಭಿಪ್ರಾಯದ ಒತ್ತಾಯವು ಬೇಡ. ಇಬ್ಬರೂ ಗುಣಪಕ್ಷ ಪಾತಿಗಳು. ಒಬ್ಬರನ್ನೊಬ್ಬರು ಪ್ರತ್ಯಕ್ಷವಾಗಿ ಅರಿಯಲು ಸಂಧಿಯನ್ನು ಒದಗಿ ಸುವುದು ನಮ್ಮ ಕೆಲಸವು. ನಾವು ನಮ್ಮ ಕರ್ತವ್ಯವನ್ನು ನೆರವೇರಿಸಿದ ಬಳಿಕ ಅವರು ಮಾಡಿದುದು ನಮಗೆ ಇಷ್ಟವಾಗಬೇಕು. ಈಗ ಪತ್ರವನ್ನು ಬರೆಯಿರಿ. ಮಹಾರಾಜರ ಉತ್ತರವು ಬರಲಿ. ಆ ಬಳಿಕ ಮುಂದಿನ ಕಾರ್ಯವನ್ನು ಯೋಚಿಸುವ. ಆವರೆಗೆ ನಾವು ಪದ್ಮನಾಭನ ತಂದೆತಾಯಿಗಳನ್ನು, ಕಾಲಿಂಗನ ಮತ್ತು ಬೀರನಾಯಕನ ಸಂಸಾರಗಳನ್ನು ಕಾಣುವ. ಇಂದು ಸಂಜೆಗೆ ಕಾಲಿಂಗನು ಬರುವನು. ಸಂಜೆಯ ಉಪಾಸನೆಯಾದ ಬಳಿಕ ಉಪಾಹಾರ ವನ್ನು ಮುಗಿಸಿಕೊಂಡು ಇಲ್ಲಿಂದ ಹೊರಡುವ. ಪದ್ಮನಾಭನ ತಂದೆತಾಯಿಗಳು ಈಗ ಬೀರನಾಯಕನಲ್ಲಿ ಇರುವರು. ಕಾಲಿಂಗನ ಸಂಸಾರವೂ ಅಲ್ಲಿಯೆ ಇರು-ವುದು. ಇಲ್ಲಿಂದ ಅಲ್ಲಿಗೆ ಎರಡು ದಿನಗಳ ದಾರಿ. ನಾಡದು ಸಂಜೆಯ ಉಪಾ ಸನೆ ಬೀರನಾಯಕನಲ್ಲಿ ಆಗಬಹುದು. ಶಿವನಾಥನು ಇನ್ನೆರಡು ಗಂಟೆಗೆ ಅಲ್ಲಿಗೆ ಹೋಗಲು ಹೊರಡುವನು. ಮಹಾರಾಜರ ಉತ್ತರವು ಅಲ್ಲಿಯೇ ಬರುವುದು. ಮಹಾರಾಜರ ಬಳಿಗೆ ಇಲ್ಲಿಂದ ಸತ್ಯೇಂದ್ರನು ಹೋಗುವನು. ಅವನೂ ಇನ್ನೆರಡು ಗಂಟೆಗೆ ಹೊರಡುವನು. "

ಸೇನಾಪತಿ ಗುರುದೇವನ ಸೂಚನೆಯಂತೆ ರಾಜನಿಗೆ ಪತ್ರಬರೆಯಲು ಅತಿಥಿಶಾಲೆಗೆ ಮರಳಿದನು. ಹಿಂದಿನ ಪ್ರಕರಣದಲ್ಲಿ ರಾಜನೂ ರಾಜ-ಪುತ್ರಿಯೂ ಓದಿದ ಪತ್ರವು ಇದುವೆ.

---

## ೨೧

ಗುರುದೇವನು ಬೀರನಾಯಕನಲ್ಲಿಗೆ ಹತ್ತು ಹನ್ನೆರಡು ದಿನಗಳಲ್ಲಿ ಬರುವರೆಂದು ಶ್ರೀಪತಿರಾಯರು ಹೇಳಿದುದನ್ನು ನಾವು ೧೩ನೆಯ ಪ್ರಕರಣ

ದಲ್ಲಿ ಓದಿರುವೆವು. ಆಗಿನಿಂದ ಅಲ್ಲಿ ಎಲ್ಲರೂ ಗುರುದೇವನ ಸ್ವಾಗತದ ಸಿದ್ಧತೆಯಲ್ಲಿ ತೊಡಗಿದರು.

ತಾತ್ಪೂರ್ತಿಕವಾಗಿ ಹೊಸದೊಂದು ಕಾವಣವನ್ನು ನಿಲ್ಲಿಸಿ ಬೀರನಾಯ-ಕನು ಅಲ್ಲಿಗೆ ತನ್ನ ದನಗಳನ್ನು ಸ್ಥಳಾಂತರಿಸಿ ದನದ ಕೊಟ್ಟಿಗೆಯನ್ನು ಅತಿಥಿಶಾಲೆಯಾಗಿ ಮಾರ್ಪಡಿಸಿದನು. ಅಲ್ಲಿಯ ಸಾರಣೆಕಾರಣೆಗಳ, ತಳಿರು-ತೋರಣಗಳ ಕೆಲಸವನ್ನು ಕಾಲಿಂದಿ ಬಾಲಬಾಲಿಕೆಯರ ಸಾಹಾಯ್ಯದಿಂದ ಬಲು ಅಚ್ಚುಕಟ್ಟಾಗಿ ಮಾಡಿದಳು. ಹಿಟ್ಟು, ಬೇಳೆ ಮೊದಲಾದ ಎಲ್ಲ ಸಾಮಗ್ರಿಗಳು ಸಂಗ್ರಹಿಸಲ್ಪಟ್ಟುವು. ಎಲ್ಲ ಕಡೆಯಲ್ಲಿಯೂ ಕಾಲಿಂದಿಯ ದೃಷ್ಟಿ ಇದ್ದಿತು, ಕೈ ಇದ್ದಿತು ಮತ್ತು ಹೃದಯವಿದ್ದಿತು. ಆದುದರಿಂದ ಎಲ್ಲೆಲ್ಲಿಯೂ ಸ್ವಚ್ಛತೆಯೂ, ಸೌಂದರ್ಯವೂ ಮಾಧುರ್ಯವೂ ಬಗೆಗೊಳಿಸುತ್ತಿದ್ದುವು.

ಎಲ್ಲರು ಮಧ್ಯಾಹ್ನದ ಊಟ ಕೆಲಸಗಳನ್ನು ಮುಗಿಸಿ ಮಾತನಾಡುತ್ತ ಕುಳಿತಿದ್ದರು. ಗುರುದೇವನೇ ಮಾತಿನ ವಿಷಯವಾಗಿದ್ದರು. ಶ್ರೀಪತಿರಾಯರು ತಾವೆಲ್ಲರೂ ಬದುಕಿದುದು, ತಮ್ಮೆಲ್ಲರ ಜೀವನವು ಸುಂದರವೂ ಪ್ರಾಣ-ಪೂರ್ಣವೂ ಆದುದು ಗುರುದೇವನ ಕೃಪೆಯಿಂದ ಎಂಬುದನ್ನು ಪ್ರತಿಯೊಬ್ಬರ ಜೀವನದಲ್ಲಿಯ ವಿವಿಧ ಪ್ರಸಂಗಗಳನ್ನು ಉದಾಹರಿಸಿ ಸ್ಪಷ್ಟಗೊಳಿಸಿದರು. ಎಲ್ಲರ ಅಂತಃಕರಣವು ಗುರುದೇವನ ವಿಷಯದಲ್ಲಿ ಪೂಜ್ಯಬುದ್ಧಿಯಿಂದ ಪ್ರಸನ್ನವಾಗಿತ್ತು. ಈ ಎಂಟು ಹತ್ತು ದಿನ ಗುರುದೇವನ ವಿಷಯದ ಮಾತೇ ನಡೆಯುತ್ತಿದ್ದುದರಿಂದ ಅಲ್ಲಿಯ ವಾತಾವರಣವು ಪವಿತ್ರವೂ ಗಂಭೀರವೂ ಆನಂದಪೂರ್ಣವೂ ಆಗಿದ್ದಿತು. ಈ ಬಗೆಯಾಗಿ ಅವರು ಇರುವಾಗ ಶಿವನಾಥನು ಬಂದು ಸಂಜೆಯ ಉಪಾಸನೆಯ ಹೊತ್ತಿಗೆ ಗುರುದೇವನು ಬರುವರೆಂದು ತಿಳಿಸಿದನು, ಮತ್ತು ಸೇನಾಪತಿ, ಪದ್ಮನಾಭ, ದೇವದತ್ತ, ಕಾಲಿಂಗ ಅವರೊಡನೆ ಇರುವರೆಂದು ಹೇಳಿದನು. ಕೇಳಿ ಎಲ್ಲರ ಅಂತಃಕರಣದಲ್ಲಿ ಆನಂದವು ಉಕ್ಕೇರಿತು. ಬೀರನಾಯಕನ ಹೃದಯವು ಭಕ್ತಿ-ಪ್ರೇಮ-ಆದರಗಳಿಂದ ತುಂಬಿತು. ಗುರುದೇವನು ತನ್ನಲ್ಲಿಗೆ ಬರುವರೆಂದು ತಾನು ಕೃತಕೃತ್ಯನಾದೆನೆಂದು ಅವನು ಗುರುಧ್ಯಾನದಲ್ಲಿ ಲೀನನಾದನು. ಆತನ ಸಂಕೋಚವು ಅಳಿದಿದ್ದಿತು, ಅಧೀರತೆ ಹೋಗಿದ್ದಿತು, ದೃಷ್ಟಿ ವಿಶಾಲವಾಗಿ

ದ್ದಿತು, ಹೃದಯವು ಉದಾರವಾಗಿದ್ದಿತು, ಆತನ ರಕ್ತದ ಹನಿಹನಿಯಲ್ಲಿಯೂ ಸ್ನೇಹವು ಸ್ಫುರಿಸುತ್ತಿದ್ದಿತು. ಪಶ್ಚಾತ್ತಾಪದಿಂದ ಪುನೀತನಾಗಿ ಸರಲವೂ ಸತ್ತ್ವಸಂಪನ್ನವೂ ಆದ ಜೀವನದ ಸೌಭಾಗ್ಯವನ್ನು ಪಡೆದ ಬೀರನಾಯಕಾ, "ನಮೋಽಸ್ತುತೇ" ಎನ್ನದೆ ಇರಬಲ್ಲುದೆ ನನ್ನ ಜಿಹ್ವೆ?

ಸೂರ್ಯನು ಮುಳುಗುವ ಹೊತ್ತಿಗೆ ಗುರುದೇವನು ಪರಿವಾರದೊಡನೆ ಬಂದರು. "ಜಯ, ಗುರುದೇವ!" ಎಂಬ ಶಬ್ದವು ಅಲ್ಲಿಯ ವಾಯುಮಂಡಲದಲ್ಲಿ ವ್ಯಾಪಿಸಿತು. "ನನ್ನ ತಂದೇ!" ಎಂದು ಓಡಿಬಂದು ಬೀರನಾಯಕನು ಗುರುದೇವನ ಅಡಿಗಳ ಮೇಲೆ ಹಣೆಯಿಟ್ಟನು. ಕಾಲಿಂದಿ ಭಕ್ತಿಯಿಂದ ಕೈಮುಗಿದು ತಲೆಬಾಗಿ ಗುರುದೇವನ ಅಡಿಗಳ ಮೇಲೆ ದೃಷ್ಟಿಯಿರಿಸಿ ನಿಂತಳು. ಎಲ್ಲರೂ ಬಂದು ನಮಸ್ಕಾರಮಾಡಿ ಕೈಮುಗಿದುಕೊಂಡು ನಿಂತರು. ಗುರುದೇವನು ಬೀರನಾಯಕನನ್ನು ಮೇಲೆ ಎಬ್ಬಿಸಿ, ಆತನನ್ನು ಬಿಗಿಯಾಗಿ ಅಪ್ಪಿ, "ಮಗನೆ, ನಿನ್ನ ಜೀವನಕ್ಕೆ ನಿರಂತರವೂ ಪಾವಿತ್ರ್ಯದ ಪ್ರಕಾಶವು ಇರಲಿ!" ಎಂದು ನುಡಿದು, "ಮಗಳೇ ಕಾಲಿಂದಿ, ಗಂಡನನ್ನು ಸನ್ಮಾರ್ಗದಲ್ಲಿ ನಡೆಯಿಸಿ ಆತನ ಬದುಕನ್ನು ಸವಿಯಾಗಿಸಿದ ಸತಿ ನೀನು. ನೀನು ಕೃತಾರ್ಥೆ!" ಎನ್ನುತ್ತ ಅವಳ ಬೆನ್ನ ಮೇಲೆ ಕೈಯಾಡಿಸಿದರು. ಬಳಿಕ ಅವರು ಎಲ್ಲರಿಗೂ ಆಶೀರ್ವದಿಸಿದರು. ಉಪಾಸನೆಯ ವೇಳೆಯಾದುದರಿಂದ ಬಂದವರು ಕೈಕಾಲುಗಳನ್ನು ತೊಳೆದುಕೊಂಡು ಉಪಾಸನೆಗೋಸುಗ ಹಂದರದಲ್ಲಿ ಹೋಗಿ ಕುಳಿತರು.

ಉಪಾಸನೆ ಪ್ರಾರಂಭವಾಯ್ತು. ಪದ್ಮನಾಭನು ಒಂದು ಪದ್ಯವನ್ನು ಹಾಡಿದನು.

ರಾಗ:—ಕಾನಡಾ

ಇಲ್ಲವೋ ವಿಮಲಮನಕಿಲ್ಲ ಭಯವು
ಬಲ್ಲವರ ಸೊಲ್ಲೊ ಇದು; ನಂಬು, ನಂಬು! ||ಪಲ್ಲವಿ||

ಎಡೆಯೆಡೆಯೊಳಿಲೆ ನೀನು ಭಯಗೊಂಡು ವ್ಯೈಯ್ಯುಡುಗಿ
ನಡೆಯುತಿಹೆ! ಬಾಹ್ಯರಿಪು ನಿನಗಿಲ್ಲವೋ! ||
ಅಡಿಯಡಿಗೆ ನಿನ್ನ ಕಾಲ್ಗಳನು ತೊಡಕಿನೊಳಿಂತು

ತೊಡರಿಸುವ ಹಗೆ ನಿನ್ನ ಮಲಿನಮನವೋ! ॥ ೧ ॥

ಬೆಳಕನೇ ಮುಸುಕಾಗಿಸುತೆ, ದಾರಿಯೊಳು ಮುಳ್ಳು-
ಗಳನು ಹರಡುವುದಲೇ ಮಲಿನ ಮನವು ॥
ಬಳಲಿಸುವುದು ಭಯವನೊದವಿಸ ವಿರೂಪವನು
ತಳೆದು ತಾನೇ ನಿನ್ನ ಮುಂದೆ ಸುಳಿದು! ॥ ೨ ॥

ಹಸನಾಗು, ಚೊಕ್ಕಚಿನ್ನದ ಮೆರುಗಿನಿಂದೆ ಶೋ-
ಭಿಸುವುದೈ ನಿನ್ನ ಸುತ್ತಲಿನ ಸೃಷ್ಟಿ ॥
ಒಸಗೆ ನಿನಗಾಗುವುದು ಹೆಜ್ಜೆ ಹೆಜ್ಜೆಗೆ, ದೇವ-
ನುಸಿರ ನರುಗಂಪಿನಲಿ ನೀನು ನಲಿವೆ! ॥ ೩ ॥

ಬಳಿಕ ವಿವಿಧ ಸ್ತೋತ್ರಗಳೂ ಪ್ರಾರ್ಥನೆಗಳೂ ನಡೆದುವು. ಕೊನೆಯಲ್ಲಿ ಗುರುದೇವನು ಗಂಭೀರ ಧ್ವನಿಯಲ್ಲಿ ಹೀಗೆಂದರು:—

"ಮಕ್ಕಳಿರಾ, ನೀವೆಲ್ಲರೂ ಇಲ್ಲಿ ಒಂದೆಡೆಯಲ್ಲಿ ಬಂಧುಭಾವದಿಂದ ಕೂಡಿರುವಿರಿ. ನಿಮ್ಮೆಲ್ಲರ ಹೃದಯವು ಪರಿಶುದ್ಧವಾಗಿರುವುದು, ಸಾತ್ತ್ವಿಕ ಭಾವದಿಂದ ಪ್ರಸನ್ನವಾಗಿರುವುದು. ಯಾರೊಬ್ಬರ ವಿಷಯದಲ್ಲಿಯೂ ನಿಮ್ಮ ಅಂತಃಕರಣದಲ್ಲಿ ದ್ವೇಷವಿಲ್ಲ, ದ್ರೋಹವಿಲ್ಲ, ತಿರಸ್ಕಾರವಿಲ್ಲ. ಒಬ್ಬರೊಬ್ಬರ ವಿಷಯದಲ್ಲಿ ನೀವೆಲ್ಲರೂ ಪ್ರೇಮವುಳ್ಳವರಾಗಿರುವಿರಿ. ಚೊಕ್ಕ ಚಿನ್ನಕ್ಕೆ ಹೊಳೆಪು ಸ್ವಾಭಾವಿಕವು, ವಿಶುದ್ಧ ಹೃದಯಕ್ಕೆ ಪ್ರೇಮವು ಸ್ವಾಭಾವಿಕವು. ನೀವೆಲ್ಲರೂ ಈಗ ಒಂದು ಅನುಪಮವಾದ, ಪವಿತ್ರವಾದ ಆನಂದವನ್ನು ಅನುಭವಿಸುತ್ತಿರು-ವಿರೆಂಬುದನ್ನು ನಿಮ್ಮ ಮುಖವು ಸಾರುತ್ತದೆ. ಮಲ್ಲಿಗೆ ಇರುವಲ್ಲಿ ಪರಿಮಳವು, ಪ್ರೇಮವಿರುವಲ್ಲಿ ಆನಂದವು. ಇದುವೆ ಜೀವನವು, ಇದುವೆ ಪರಮಾತ್ಮ-ನಡಿಗೆ ಕೈಹಿಡಿದು ನಡೆಯಿಸುವ ಪರಮಬಂಧು. ಸಂಕೋಚವು, ಅಧೀರತೆ, ಕಾರ್ಪಣ್ಯವು, ಇವೆಲ್ಲವು ಮಲಿನ ಮನಸ್ಸಿನ ವಿಕಾರಗಳು. ನಿಮ್ಮ ಹೃದಯವು ವಿಶಾಲವಾಗಿದೆ, ಉದಾತ್ತವಾಗಿದೆ, ಉದಾರವಾಗಿದೆ. ಸಂಕುಚಿತ, ಅಧೀರ, ಕೃಪಣ ಹೃದಯವು ಸಾತ್ತ್ವಿಕ ಆನಂದದ ಪ್ರಖರ ತೇಜವನ್ನು ಗ್ರಹಿಸಲು ಅಸಮರ್ಥವಾಗಿರುತ್ತದೆ. ನೀವು ಇಂದು ಆ ಆನಂದವನ್ನು ನಿಮ್ಮದಾಗಿಸಿರು-ವಿರಿ, ಸಂಯಮಿಗಳಾಗಿ ಆ ಆನಂದವನ್ನು ಸವಿಯುತ್ತಿರುವಿರಿ. ನಿಮ್ಮ ವರ್ತ

ನವನ್ನು ಸಾತ್ತ್ವಿಕತೆಯಿಂದ ಸುಂದರವಾಗಿಸಿ ಪರಮೇಶ್ವರನ ಪ್ರೇಮವನ್ನು ಸಂಪಾದಿಸಿರುವಿರಿ. ಮಕ್ಕಳಿರಾ, ಸಾತ್ತ್ವಿಕತೆಯ ಮಹಿಮೆಯನ್ನು, ಪ್ರಭಾವ ವನ್ನು ಅರಿತಿರುವಿರಿ. ನಿಮ್ಮ ವರ್ತನದಿಂದ ಜಗತ್ತು ಸಾತ್ತ್ವಿಕತೆಯ ಸೌಭಾ-ಗ್ಯವು ಎಂತಹದಾಗಿರುತ್ತದೆಂಬುನ್ನು ಅರಿಯಲಿ. ದೇವದೇವನ ಪ್ರಸಾದವು ನಿಮಗೆ ನಿರಂತರವೂ ಇರಲಿ! "

ಉಪಾಸನೆ ಮುಗಿಯಿತು. ಗುರುದೇವನ ಕೃಪೆಯಿಂದ ತಾವೆಲ್ಲರೂ ಬಂಧುಗಳಾದೆವೆಂದು ಸೇನಾಪತಿ ಮೊದಲಾಗಿ ಎಲ್ಲರೂ ಹಿಗ್ಗಿದರು, ಮತ್ತು ಗುರುದೇವನ ಪ್ರೇಮವು ತಮಗೆ ಲಭಿಸಿದುದು ಪರಮಾತ್ಮನ ಪ್ರಸಾದವೆಂದು ಭಕ್ತಿನಮ್ರರಾಗಿ ಪರಮಾತ್ಮನಡಿಗೆ ತಲೆಬಾಗಿದರು. ಗುರುದೇವನು ಜಸ-ಕ್ಯೋಸುಗ ಅತಿಥಿಶಾಲೆಗೆ ನಡೆದರು. ಶಿವನಾಥನು ಅವರನ್ನು ಹಿಂಬಾಲಿಸಿ ದನು. ಹೆಣ್ಣುಮಕ್ಕಳೂ ಹುಡುಗರೂ ಒಳಗೆ ಹೋದರು. ಉಳಿದವರು ಹಂದರದಲ್ಲಿ ಉಳಿದರು.

ಸೇನಾಪತಿ ಮಾನಸಿಂಹನು ಮಕ್ಕಳೊಡನೆ ಕುಳಿತಿದ್ದ ಶ್ರೀಪತಿರಾಯರ ಬಳಿಗೆ ಬಂದನು. ಅವರು ಎದ್ದು ಅವನನ್ನು ಪ್ರೇಮದಿಂದ ಕೈಹಿಡಿದು ಹತ್ತಿರ ಕುಳ್ಳಿರಿಸಿಕೊಂಡರು ಸೇನಾಪತಿ ಎಂದನು, "ಕ್ಷಮೆಯನ್ನು ಬೇಡಲು ನನಗೆ ನಾಲಗೆಯಿಲ್ಲ. ಆದರೆ ಪುಣ್ಯಾತ್ಮರಾದ ತಾವು ಈಗಿನ ನನ್ನ ಅಂತಃ ಕರಣವನ್ನು ಬಲ್ಲಿರಿ.

" ಸೇನಾಪತೀ, ಬಂಧು ಬಂಧುವಿನಲ್ಲಿ ಕ್ಷಮೆಯನ್ನು ಯಾಚಿಸಬೇಕೆ? ಗುರುದೇವನ ಪಾವನವಾದ ಸಾನಿಧ್ಯದಿಂದ ನಮ್ಮೆಲ್ಲರ ಅಂತಃಕರಣವು ಪರಿ ಶುದ್ಧವಾಗಿರುವುದು. ಎಲ್ಲರ ಹೃದಯದಲ್ಲಿ ಈಗ ಒಂದೇ ಭಾವನೆ-ಸರ್ವರಿಗೆ ಹಿತವಾಗಲೆಂದು, ನಿಮ್ಮ, ನನ್ನ, ನಮ್ಮೆಲ್ಲರ ಅಪರಾಧವನ್ನು ದೇವದೇವನು ಕ್ಷಮಿಸಿರುವನು. ಹಾಗೆ ಇಲ್ಲದಾಗಿದ್ದರೆ ನಮ್ಮೆಲ್ಲರಿಗೆ ಗುರುದೇವನಂತಹ ಪುಣ್ಯಪುರುಷರ ಸಹವಾಸವು ಲಭಿಸುತ್ತಿದ್ದಿತೆ? ಪ್ರೇಮದ ಮಹಿಮೆ ಗೊತ್ತಾ-ಗುತ್ತಿದ್ದಿತೆ? ಸಾಧುತ್ವವು ನಮ್ಮ ಹೃದಯವನ್ನು ಆಕರ್ಷಿಸುತ್ತಿದ್ದಿತೆ? ಸೇನಾಪತೀ, ನಿಮ್ಮಂತೆ ಮತ್ತು ಬೀರನಾಯಕನಂತೆ ನಾನೂ ಅಪರಾಧಿ ಯಾಗಿದ್ದೆನು."

" ತಾವು ಅಪರಾಧಿ ? "

" ಅಹುದು, ಸೇನಾಪತೀ, ನಾನೂ ಅಪರಾಧಿ! ಬೀರನಾಯಕನು ಕೂಸನ್ನು ಒಯ್ದ ಬಳಿಕ ನಾನು ಶೋಕವಶನಾದುದು ಸ್ವಾಭಾವಿಕವು. ಆದರೆ ಶೋಕದ ನೆಳಿತಕ್ಕೆ ಸಿಕ್ಕಿದ ನಾನು ಕ್ರೋಧಕ್ಕೆ ಎಡೆಗೊಟ್ಟೆನು. ನನ್ನ ಬುದ್ಧಿ ವಿಕೃತವಾಯ್ತು. ಕೂಸನ್ನು ಒಯ್ದವನನ್ನು ಬಾಯ್ಗೆ ಬಂದಂತೆ ಶಪಿಸಿದೆನು. ಯಾರಾದರೂ ಅವನಿಂದ ಈ ದುಷ್ಟ ಕೆಲಸವನ್ನು ಮಾಡಿಸಿರಬಹುದೆಂದು ತರ್ಕಿಸಿ ಅವರಿಗೂ ಅಭದ್ರಗಳನ್ನು ನುಡಿದೆನು. ನನ್ನ ನಾಲಗೆ ಪಾಪಿಯಾಯ್ತು. ಕೂಸನ್ನು ಒಯಿಸಿದವರು ನೀವೆ ಎಂಬುದು ನನಗೆ ಗೊತ್ತಾಗುವ ಮೊದಲೆ ಗುರುದೇವನ ಪುಣ್ಯಸಹವಾಸವು ನನಗೆ ಲಭಿಸಿತು. ಅವರ ಪ್ರಸಾದದಿಂದ ನನ್ನ ದೃಷ್ಟಿ ನಿರ್ಮಲವಾಯ್ತು. ನಾನು ಅಭದ್ರಗಳನ್ನು ನುಡಿದು ಪಾಪ ಮಾಡಿದೆನೆಂಬ ಅರಿವು ನನಗಾಯ್ತು. ಕೂಸನ್ನು ಒಯ್ಸಿದವರು ನೀವು ಎಂದು ಗುರುದೇವನು ನನಗೆ ಕೆಲಕಾಲದ ಮೇಲೆ ತಿಳಿಸಿದರು, ಮತ್ತು ನಿಮ್ಮನ್ನೂ ಬೀರನಾಯಕನನ್ನೂ ನನ್ನ ಬಂಧುಗಳಾಗಿ ತಿಳಿದು ನಿಮ್ಮಿಬ್ಬರ ಕಲ್ಯಾಣವನ್ನು ಚಿಂತಿಸುತ್ತಿರುವುದೇ ನನ್ನ ಕರ್ತವ್ಯವೆಂಬುದನ್ನು ಸ್ಪಷ್ಟಗೊಳಿಸಿದರು. ಆ ಗುರುದೇವನ ಪ್ರಸಾದದಿಂದ ನಾವೆಲ್ಲರೂ ಇಂದು ಒಡಹುಟ್ಟಿದವರಾಗಿ ಸಾತ್ತ್ವಿಕ ಆನಂದವನ್ನು ಅನುಭವಿಸುವ ಭಾಗ್ಯಶಾಲಿಗಳಾಗಿರುವೆವು "

" ಮಗನನ್ನು ಕಳೆದುಕೊಂಡು ಶೋಕಾಕುಲರಾದ ತಮ್ಮ ಮುಖ-ದಿಂದ ಅಪಶಬ್ದಗಳು ಬಂದುದು ಅಸ್ವಾಭಾವಿಕವಲ್ಲ. ಉದಾರಹೃದಯರಾದ ತಾವು ನನ್ನನ್ನೂ ಬೀರನಾಯಕನನ್ನೂ ಕ್ಷಮಿಸಿ ನಮ್ಮನ್ನು ಬಂಧುಗಳಾಗಿ ಎಣಿಸುತ್ತಿರುವಿರಿ. ನಾನು ಧನ್ಯನು. ಬೀರನಾಯಕನೂ ಕಾಲಿಂಗನೂ ನನ್ನನ್ನು ಕ್ಷಮಿಸಿರುವರು ನನ್ನನ್ನು ತಮ್ಮ ಬಂಧುವಾಗಿ ಮಾಡಿಕೊಂಡಿರುವರು. ಪದ್ಮನಾಭನು ಮಕ್ಕಳಿಲ್ಲದ ನನಗೆ ಮಗನಾದನು. ಗುರುದೇವನ ಪುಣ್ಯದ ಪ್ರಭಾವವು ಅಗಮ್ಯವು ! "

" ಜಯು, ಗುರುದೇವ! " ಎಂದು ಎಲ್ಲರೂ ಭಕ್ತಿಪೂರ್ಣಹೃದಯದಿಂದ ಜಯಘೋಷವನ್ನು ಮಾಡಿದರು.

---

೨೨

ಮಾರುದಿನ ಬೆಳಗಿನಲ್ಲಿ ಗುರುದೇವನು ಸ್ನಾನ ದೇವತಾರ್ಚನೆಗಳನ್ನು ತೀರಿಸಿ ಹಂದರದಲ್ಲಿ ಮಕ್ಕಳೊಡನೆ ಮಗುವಾಗಿ ಆಟವಾಡುತ್ತ ಕುಳಿತಿದ್ದರು. ಗಾಂಭೀರ್ಯದ ಮೂರ್ತಿಯಾದ ಅವರು ಮಕ್ಕಳಲ್ಲಿ ಮಗುವಾಗಿದ್ದ ಆ ನೋಟವು ಹೃದಯಾಕರ್ಷಕವಾಗಿತ್ತು. ಕ್ಷಣಕ್ಕೊಂದು ಹೊಸ ಬಗೆಯ ವಿನೋದದಿಂದ ಅವರು ಮಕ್ಕಳನ್ನು ಆನಂದಸಾಗರದಲ್ಲಿ ತೇಲಿಸುತ್ತಿದ್ದರು. ವಯೋವೃದ್ಧರಾಗಿದ್ದರೂ ಅವರ ಹಾಡುಗಳಲ್ಲಿ ಸವಿ ತುಂಬಿ ತುಳುಕುತ್ತಿದ್ದಿತು. ಮಕ್ಕಳ ಉಲ್ಲಾಸಕ್ಕೆ ಪಾರವೇ ಇರಲಿಲ್ಲ. ರಂಗನಾಯಕನಂತು ಹತ್ತು ನಿಮಿಷಗಳಲ್ಲಿ ಅವರ ತೊಡೆಯ ಮೇಲೆಯೇ ಹೋಗಿ ಕುಳಿತನು. "ನೀವು ಅಜ್ಜ; ಇಷ್ಟು ದಿನ ಎಲ್ಲಿ ಇದ್ದಿರಿ ? ಇಲ್ಲಿ ಏಕೆ ಬಂದಿರಲಿಲ್ಲ ? ಇನ್ನು ಮೇಲೆ ನೀವು ಇಲ್ಲಿಂದ ಎಲ್ಲಿಯೂ ಹೋಗಬೇಡಿರಿ. ಹೋದರೆ ನಮ್ಮನ್ನೂ ಕರೆಕೊಂಡು ಹೋಗಿರಿ. ನೀವು ಅಪ್ಪನ ಅಪ್ಪನೊ, ಅವ್ವನ ಅಪ್ಪನೊ ? ನಿಮಗೆ ಬೆಂಡಿನ ಚಕ್ಕಡಿ ಮಾಡಲಿಕ್ಕೆ ಬರುತ್ತದೇನು ?" ಹೀಗೆ ಅವನು ಏನನ್ನೋ ಹೇಳುತ್ತಿದ್ದನು ಮತ್ತು ಕೇಳುತ್ತಿದ್ದನು. ಗುರುದೇವನು ನಗುತ್ತ ಅವನ ಮಾತುಗಳನ್ನು ಕೇಳುತ್ತ ಮತ್ತು ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಹೇಳುತ್ತ, "ರಂಗನಾಯಕಾ, ನೀನು ಬಲು ಜಾಣನಯ್ಯಾ. ಇನ್ನೂ ಜಾಣನಾಗು," ಎಂದು ನುಡಿದು ಅವನನ್ನು ಉಲ್ಲಾಸಗೊಳಿಸಿದರು, ಮತ್ತು ಉಳಿದವರಿಗೂ ಮಾತು-ಕಥೆಗಳನ್ನು ಹೇಳಿ ಅವರನ್ನು ಜ್ಞಾನೋತ್ಸುಕರಾಗಿ ಮಾಡಿದರು.

ಹೀಗೆ ಗುರುದೇವನು ಮಕ್ಕಳಲ್ಲಿ ತಲ್ಲೀನರಾಗಿ ಇರುವಾಗ ರಾಜಧಾನಿಗೆ ಹೋಗಿದ್ದ ಸತ್ಯೇಂದ್ರನು ಮರಳಿ ಬಂದು ಗುರುದೇವನಿಗೆ ನಮಸ್ಕಾರಮಾಡಿ ರಾಜಮುದ್ರಾಂಕಿತವಾದ ಪತ್ರವನ್ನು ಅವರ ಕೈಗೆ ಕೊಟ್ಟು ಒಂದೆಡೆಯಲ್ಲಿ ನಿಂತುಕೊಂಡನು. ಪತ್ರವನ್ನು ಓದುತ್ತ ಹೋದಂತೆ ಗುರುದೇವನ ಮುಖವು ಆನಂದದಿಂದ ಅರಳುತ್ತ ಹೋಯ್ತು. ಓದುವುದಾದ ಮೇಲೆ ಸತ್ಯೇಂದ್ರನಿಗೆ, "ಸೇನಾಪತಿಯನ್ನು ನನ್ನ ಕಡೆಗೆ ಕಳುಹು." ಎಂದು ಹೇಳಿ ಅವರು ಅತಿಥಿ ಶಾಲೆಗೆ ಬಂದರು.

ಸ್ವಲ್ಪ ಹೊತ್ತಿನಲ್ಲಿ ಸೇನಾಪತಿ ಬಂದನು. ಗುರುದೇವನು ರಾಜಸಂದೇಶವನ್ನು ಅವನಿಗೆ ಓದಲು ಕೊಟ್ಟರು. ಸೇನಾಪತಿ ಎರಡೂ ಕೈಗಳಿಂದ ಪತ್ರವನ್ನು ತೆಗೆದುಕೊಂಡು ತಲೆಯ ಮೇಲೆ ಇರಿಸಿಕೊಂಡನು. ಬಳಿಕ ಅದನ್ನು ಬಿಚ್ಚಿ ಓದಿದನು. ಆನಂದಾಶ್ರುಗಳು ಅವನ ಕಣ್ಣುಗಳಿಂದ ಉದಿರಿದುವು. "ಭಗವನ್, ತಮ್ಮ ವಾಣಿ ಅಮೋಘವು!" ಎನ್ನುತ್ತ ಅವನು ಗುರುದೇವನ ಕೈಗೆ ಮರಳಿ ಪತ್ರವನ್ನು ಕೊಟ್ಟನು, ಮತ್ತು ಎಂದನು, "ಭಗವನ್, ನಾವು ಈಹೊತ್ತೇ ಮಧ್ಯಾಹ್ನದ ಊಟವಾದ ಬಳಿಕ ಸ್ವಲ್ಪ ವಿಶ್ರಮಿಸಿ ಹೊರಡಬೇಕು. ಎಂದರೆ ನಾಳೆ ಸಾಯಂಕಾಲದ ಸಮಯಕ್ಕೆ ರಾಜಧಾನಿಯಲ್ಲಿ ಇರುವೆವು. ಯಾರು ಯಾರು ಹೊರಡಬೇಕು?"

"ಐವರು ಹೊರಡುವ. ನೀವು, ನಾನು, ಪದ್ಮನಾಭನು, ಸತ್ಯೇಂದ್ರನು ಮತ್ತು ಶಿವನಾಥನು."

"ರಾಹುತನೊಬ್ಬನನ್ನು ಮುಂದೆ ಕಳಿಸಬಹುದಲ್ಲವೆ?"

"ಕಳಿಸಬಹುದು"

ಸೇನಾಪತಿ ತನ್ನ ಕೆಲಸಕ್ಕೆ ಹೋದನು. ಬಳಿಕ ಗುರುದೇವನು ಶ್ರೀಪತಿರಾಯನನ್ನು, ಕಾಲಿಂಗನನ್ನು ಮತ್ತು ಬೀರನಾಯಕನನ್ನು ಕರೆಯಿಸಿ ಎಲ್ಲ ವೃತ್ತಾಂತವನ್ನು ಅವರಿಗೆ ತಿಳಿಸಿದರು ಮತ್ತು ಸುದ್ದಿಯನ್ನು ಬಹಿರಂಗಪಡಿಸಕೂಡದೆಂದು ಹೇಳಿ ಅವರನ್ನು ಕಳಿಸಿದರು. ತರುವಾಯ ಅವರು ಪದ್ಮನಾಭ, ಸತ್ಯೇಂದ್ರ ಮತ್ತು ಶಿವನಾಥ ಇವರನ್ನು ಕರೆಯಿಸಿ, "ಮಧ್ಯಾಹ್ನದ ಊಟವಾದ ಮೇಲೆ ಸೇನಾಪತಿಯೊಡನೆ ನಾವಿಷ್ಟು ಜನರು ರಾಜಧಾನಿಗೆ ಹೊರಡಬೇಕು," ಎಂದು ಹೇಳಿ ಪ್ರವಾಸದ ಸಿದ್ಧತೆಯನ್ನು ಮಾಡಲು ಸೂಚಿಸಿದರು

ಮರುದಿನ ಇಳಿಹೊತ್ತಿನಲ್ಲಿ ವಿಜಯಪುರದ ಅರಮನೆಯಲ್ಲಿ ರಾಜಪುತ್ರಿ ರಾಜಲಕ್ಷ್ಮಿ ತನ್ನ ಕೋಣೆಯಲ್ಲಿ ಪದ್ಮನಾಭನ ಚಿತ್ರವನ್ನು ಮುಂದೆ ಇಟ್ಟು ಕೊಂಡು 'ಶ್ರೀಸ್ತೃಣೀಕೃತ' ಎಂಬ ಶ್ಲೋಕವನ್ನು ಹೇಳುತ್ತ ಕುಳಿತಿದ್ದಳು. ಎಷ್ಟೋ ಸಲ ಆ ಶ್ಲೋಕವನ್ನು ಹೇಳಿದ್ದರೂ ಕೊನೆಯ ಚರಣವನ್ನು ಪೂರ್ಣವಾಗಿ ಹೇಳುತ್ತಿರಲಿಲ್ಲ, 'ವೀರೋ रसः किमयमेत्युत' ಇಷ್ಟಕ್ಕೇ ತಡೆಯುತ್ತಿದ್ದಳು. ಉಳಿದ ಎರಡು ಶಬ್ದಗಳನ್ನು ಉಚ್ಚರಿಸಲು ಅವಳಿಗೆ ಮನಸ್ಸಾಗದು. "ಈ ಮಹಾನುಭಾವನಲ್ಲಿ ದರ್ಪದ ಲವಲೇಶವೂ ಇಲ್ಲ.

ದರ್ಪವು ತಮೋಗುಣದ ಒಂದು ರೂಪು. ಈ ಪುರುಷನಲ್ಲಿ ಅದಕ್ಕೆ ಆಸ್ಪದ ವಿಲ್ಲ. ಆದರೆ ಶ್ಲೋಕವು ಪೂರ್ಣವಾಗಬೇಕಲ್ಲ! ಆ ಎರಡು ಶಬ್ದಗಳ ಸ್ಥಳದಲ್ಲಿ ಬೇರೆ ಯಾವ ಶಬ್ದಗಳನ್ನು ಇಡಲಿ? ಮನೋವಲ್ಲಭನನ್ನು ಪೂರ್ಣ ವಾಗಿ, ಸತ್ಯವಾಗಿ ಚಿತ್ರಿಸಬಹುದಾದ ಶಬ್ದಗಳು ಯಾವುವು?" ಎನ್ನುತ್ತ ಬೇರೆ ಬೇರೆ ಶಬ್ದಗಳನ್ನಿಟ್ಟು ನೋಡಿದಳು, ಆದರೆ ಅವಳಿಗೆ ತೃಪ್ತಿಯಿಲ್ಲ. "ಶ್ಲೋಕವು ಅಪೂರ್ಣವಾಗಿದ್ದರೂ ಚಿಂತೆಯಿಲ್ಲ, ಆದರೆ ಅಯಥಾರ್ಥವಾದು ದನ್ನು ಇಟ್ಟು ಚಿತ್ರವನ್ನು ಅಂದಗೆಡಿಸಲೊಲ್ಲೆನು," ಹೀಗೆನ್ನುತ್ತ ಅವಳು ಕುಳಿತಿರುವಾಗ ರಾಜನು ಅವಳ ಕೋಣೆಗೆ ಬಂದು ಬಾಗಿಲನ್ನು ತಟ್ಟಿದನು. ರಾಜಲಕ್ಷ್ಮಿ ತಟ್ಟನೆ ಎದ್ದು ಹೋಗಿ ಬಾಗಿಲನ್ನು ತೆರೆದಳು. ರಾಜನೆಂದನು, "ಮಗು, ಸೇನಾಪತಿ ಗುರುದೇವನೊಡನೆ ಇನ್ನೊಂದು ಗಂಟೆಯಲ್ಲಿ ಇಲ್ಲಿಗೆ ಬರುವರು. ಗುರುದೇವನನ್ನು ಸ್ವಾಗತಿಸಲು ನಾವು ಬೇಗನೆ ಸಿದ್ಧರಾಗಬೇಕು."

"ಗುರುದೇವನ ಪರಿವಾರವೂ ಇರುವುದಲ್ಲವೆ?"

"ಇರುವುದು. ಅವರ ಪರಿವಾರದವರು ಮೂವರು ಮಾತ್ರ."

"ಯಾರು ಯಾರು ಆ ಮೂವರು?"

"ನಮಗೆ ಪರಿಚಿತನಾದ ಸತ್ಯೇಂದ್ರನು ಒಬ್ಬನು, ಇನ್ನೊಬ್ಬನು ಗುರು ದೇವನ ಶಿಷ್ಯರಲ್ಲಿ ಒಬ್ಬನು, ಮೂರನೆಯವನು:—"

"ಯಾರು?"

"ಯಾರೆಂಬುದನ್ನು ತರ್ಕಿಸು, ಮಗು."

"ನೀವೇ ಹೇಳಿರಿ, ಅಪ್ಪಾ!"

"ಪದ್ಮನಾಭನು, ಮಗು!"

ಮಗಳ ಅರಳಿದ ಮುಖವನ್ನು ಕಂಡು ರಾಜನ ಹೃದಯವು ಹಿಗ್ಗಿತು. ಅವನು ಎಂದನು,:—

"ಸಂಜೆಯ ಹೊತ್ತಿಗೆ ಅವರು ಬರುವರು. ಗುರುದೇವನ ಉಪಾಸ ನೆಯ ವೇಳೆ ಅದು. ಬಂದೊಡನೆ ಉಪಾಸನೆ ಪ್ರಾರಂಭವಾಗುವುದು. ಉಪಾಸನೆಗೆ ಶ್ರೀಗೃಹದ ಮುಂದಿನ ಅಂಗಳವು ಸ್ಥಳವು. ನಾವು ಕೈಕಾಲು ಗಳನ್ನು ತೊಳೆದುಕೊಂಡು ಅವರು ಬರುವ ಹೊತ್ತಿಗೆ ಒಳ ಅಂಗಳದಲ್ಲಿ ಹೋಗಿ ನಿಲ್ಲುವ."

ಮುಂದೆ ಅರ್ಧ ಗಂಟೆಗೆ ರಾಜನೂ ರಾಜಪುತ್ರಿಯೂ ಗುರುದೇವನನ್ನು ಸ್ವಾಗತಿಸಲು ಪರಿವಾರದೊಡನೆ ಒಳಅಂಗಳಕ್ಕೆ ಬಂದರು. ಅರಮನೆಯ ಮಹಾದ್ವಾರವು ಮತ್ತು ಉಳಿದ ಬಾಗಿಲುಗಳು ತಳಿರು ತೋರಣಗಳಿಂದ ಶೃಂಗರಿಸಲ್ಪಟ್ಟಿದ್ದುವು. ಮಹಾದ್ವಾರದ ಗೋಪುರದ ಮೇಲೆ ರಾಜಧ್ವಜವು ಉಲ್ಲಾಸದಿಂದ ಮಿಳಿರುತ್ತಿತ್ತು. ಹೊರ ಒಳಅಂಗಳಗಳಲ್ಲಿ ಸುಗಂಧ ಜಲ ದಿಂದ ಚಳೆಯನಿಕ್ಕಿದ್ದರು, ರಂಗವಲ್ಲಿಗಳನ್ನು ಬರೆದಿದ್ದರು. ಅಲ್ಲಲ್ಲಿ ಹೂ-ಮಾಲೆಗಳನ್ನು ಇಳಬಿಟ್ಟಿದ್ದರು. ಎಲ್ಲರೂ ಪ್ರಸನ್ನ ಮುಖದಿಂದ ಗುರುದೇವನ ದರ್ಶನಕ್ಕೋಸುಗ ಉತ್ಸುಕರಾಗಿ ನಿಂತಿದ್ದರು.

ಸ್ವಲ್ಪ ಹೊತ್ತಿನಲ್ಲಿ ತುತ್ತೂರಿಗಳೂ ಕಹಳೆಗಳೂ ಊದಲಾರಂಭಿಸಿ ಗುರುದೇವನ ಆಗಮನವನ್ನು ಸೂಚಿಸಿದುವು. ರಾಜನು ಮಗಳೊಡನೆ ಮಹಾ ದ್ವಾರದ ಹೊರಗೆ ಬಂದು ನಿಂತನು. ರಥವು ಬಂದಿತು. 'ಜಯ, ಗುರುದೇವ' ನಿನಾದವು ನಭೋಮಂಡಲವನ್ನು ವ್ಯಾಪಿಸಿತು. ರಥದೊಳಗಿನವರು ಚಟ-ಚಟನೆ ಕೆಳಗಿಳಿದರು. ಸೇನಾಪತಿ ಗುರುದೇವನನ್ನು ಇಳಿಸಿಕೊಂಡನು. ಅಷ್ಟರಲ್ಲಿ ರಾಜನು ಬಂದು ಗುರುದೇವನಿಗೆ ಸಾಷ್ಟಾಂಗವೆರಗಿ ಅವರ ಆಶೀರ್ವಾದಗಳನ್ನು ಪಡೆದು ಅವರನ್ನು ಕೈಹಿಡಿದು ರಾಜಗೃಹದಲ್ಲಿ ಕರೆದು ಕೊಂಡು ಬಂದನು. ರಾಜಪುತ್ರಿ ಗುರುದೇವನ ಅಡಿಗಳ ಮೇಲೆ ಹಣೆಯಿಟ್ಟು ಆಶೀರ್ವಾದವನ್ನು ತಳೆದು ಕೈಮುಗಿದುಕೊಂಡು ಬದಿಯಲ್ಲಿ ನಿಂತಳು. ಅಷ್ಟರಲ್ಲಿ ಪದ್ಮನಾಭನು ಅಲ್ಲಿಗೆ ಬಂದನು. ರಾಜಪುತ್ರಿಯ ದೃಷ್ಟಿ ಅತ್ತ ಹೋಯ್ತು. ಏನು ಆತನ ಕಣ್ಣುಗಳ ತೇಜಸ್ಸು! ಎಷ್ಟೊಂದು ಆತನ ಮಂದಸ್ಮಿತದ ಮಾಧುರ್ಯವು! ಆತನ ವಿಶಾಲವಾದ ಹಣೆಯಲ್ಲಿ ಬುದ್ಧಿ-ಮತ್ತೆ ಸ್ಫುರಿಸುತ್ತಿತ್ತು. ಆತನ ಪ್ರತಿಯೊಂದು ಅಂಗವೂ ಸೌಂದರ್ಯ ದೇವಿಯ ಕ್ರೀಡಾಸ್ಥಾನವಾಗಿತ್ತು. ಪಾವಿತ್ರ್ಯವು ಆತನ ರೋಮ ರೋಮ ದಲ್ಲಿ ತುಂಬಿ ತುಳುಕುತ್ತಿತ್ತು, ಪುಣ್ಯದ ಪುಂಜವನ್ನೇ ತಾನು ನೋಡುತ್ತಿರುವೆ-ನೆಂಬಂತೆ ರಾಜಪುತ್ರಿಗೆ ಎನಿಸಿತು. ಕೂಡಲೆ ಅವಳು ಸ್ಫೂರ್ತಿಗೊಂಡು ಶ್ಲೋಕದ ಕೊನೆಯ ಚರಣವನ್ನು ಪುಣ್ಯಪುಂಜಃ ಎಂಬ ಶಬ್ದಗಳನ್ನಿಟ್ಟು ಪೂರ್ಣಗೊಳಿಸಿ, ''वीरो रस: किमयमेत्युत पुण्यपुंज:'' ಎಂದು ಮನಸ್ಸಿನಲ್ಲಿ ನಾಲ್ಕಾರು ಸಲವಾದರೂ ಹೇಳಿದಳು.

ಉಪಾಸನೆಯ ಸಮಯವಾದುದರಿಂದ ಬಂದವರೆಲ್ಲರು ಕೈಕಾಲುಗಳನ್ನು ತೊಳೆದುಕೊಂಡು ಶ್ರೀಗೃಹದ ಮುಂದಿನ ಅಂಗಳದಲ್ಲಿ ಬಂದು ಕುಳಿತರು. ಪಾವನವಾದ ಸಂಧ್ಯಾಸಮಯವು, ಸುತ್ತಲು ಹೃದಯಸ್ಪರ್ಶಿಯಾದ ಶಾಂತಿ, ಗುರುದೇವನ ಪ್ರಶಾಂತವೂ ಗಂಭೀರವೂ ಪವಿತ್ರವೂ ಆದ ಸಾನಿಧ್ಯವು. ಎಲ್ಲರ ಅಂತಃಕರಣಗಳು ಭಕ್ತಿಪೂರ್ಣವಾದುವು. ಪದ್ಮನಾಭನು ಪ್ರಾರಂಭದಲ್ಲಿ, "ನಿನ್ನ ಕೈಗೂಸಾಗಿ ನಲಿವೆನೆಂದು?" ಎಂಬ ಹಾಡನ್ನು ಹಾಡಿದನು. ಆತನ ಹೃದಯದ ಪಾವಿತ್ರ್ಯ, ಗಾಂಭೀರ್ಯ, ಮಾಧುರ್ಯ, ಭಕ್ತಿ, ಹಾಡಿನಲ್ಲಿ ತುಂಬಿ ಸೂಸಿದುವು. ತನ್ನ ಹೃದಯವನ್ನು ಬಲವಾಗಿ ಸೆಳೆದ ಆ ಪುಣ್ಯಪುಂಜದಲ್ಲಿ ನಟ್ಟ ರಾಜಪುತ್ರಿಯ ದೃಷ್ಟಿ ಅತ್ತಿತ್ತ ಕದಲಲಿಲ್ಲ. "ನನ್ನ ಜೀವನವನ್ನು ಸಾರ್ಥಕವಾಗಿಸುವ ನನ್ನ ಸ್ವಾಮಿ!" ಎಂಬ ಉದ್ಗಾರವು ಅವಳ ಅಂತಃಕರಣವನ್ನು ವ್ಯಾಪಿಸಿತು. "ಈತನು ಹಾಡಿದ ಈ ಹಾಡನ್ನು ಇದೇ ರೀತಿಯಾಗಿ ನಾನು ನನ್ನ ವೀಣೆಯಲ್ಲಿ ನುಡಿಸಬಲ್ಲೆನೆ? ಪ್ರಯತ್ನಿಸುವೆನು. ಸೇನಾಪತಿ ತಮ್ಮ ಪತ್ರದೊಡನೆ ಈ ಹಾಡನ್ನು ಬರೆದು ಕಳಿಸಿದ್ದಾರೆ ಹಾಡಿನ ರಾಗ ರೀತಿಗಳನ್ನು ಈ ಮಹಾತ್ಮನಿಂದ ನಾನು ಅರಿತೆನು. ನನ್ನ ಬದುಕಿಗೆ ಇದು ಬೆಳಕಾಗುವುದು." ಎಂದು ಅವಳು ಪದ್ಮನಾಭನು ಹಾಡಿದ ರೀತಿಯನ್ನು ಮನನ ಮಾಡತೊಡಗಿದಳು. ಉಪಾಸನೆ ಮುಗಿಯಿತು. ಎಲ್ಲರೂ ಪ್ರಸನ್ನಚಿತ್ತರಾಗಿ ಗುರುದೇವನ ದರ್ಶನದಿಂದ ಕೃತಕೃತ್ಯರಾದೆವೆನ್ನುತ್ತ ಆಲ್ಲಿಂದ ಎದ್ದರು

೨೩

ಬೆಳಗಾಗಲು ಇನ್ನೂ ಎರಡು ಗಂಟೆ ಇದ್ದಿತು. ರಾಜಪುತ್ರಿ ತನ್ನ ಕೋಣೆಯಲ್ಲಿ ವೀಣೆಯನ್ನು ನುಡಿಸಲಾರಂಭಿಸಿದಳು. ಮೊದಲು ಉದಯ ರಾಗದಲ್ಲಿ ಈಶಸ್ತುತಿಯನ್ನು ನುಡಿಸಿದಳು. ಬಳಿಕ ಕಾನಡಾರಾಗದಲ್ಲಿ 'ಕ್ಷೀಣ್ಣೀಕೃತ' ಶ್ಲೋಕವನ್ನು ತಾನು ಪೂರ್ಣಗೊಳಿಸಿದಂತೆ ನಾಲ್ಕಾರು ಸಲ ನುಡಿಸಿ, 'ನಿನ್ನ ಕೈಗೂಸಾಗಿ ನಲಿವೆನೆಂದು?' ಎಂಬ ಹಾಡನ್ನು ನುಡಿಸತೊಡಗಿದಳು. ಪ್ರಸನ್ನಚಿತ್ತದಿಂದ ಅವಳು ವೀಣೆಯ ತಂತಿಗಳನ್ನು ಮೀಟುತ್ತ ಬೆರಳುಗಳನ್ನು ತಂತಿಗಳ ಮೇಲೆ ಆಡಿಸುತ್ತ ಹಾಡಿನ ಭಾವದಲ್ಲಿ ತಲ್ಲೀನೆಯಾ

ದಳು. ಭಕ್ತಿಪರವಶೆಯಾದ ಆಕೆಯ ಅಂಗುಲಿಗಳ ಸ್ಪರ್ಶದಿಂದ ತಂತಿಗಳು ಚೈತನ್ಯಯುಕ್ತವಾಗಿ ಆಕೆಯ ಅಂತರಾತ್ಮದ ಪಾವಿತ್ರ್ಯನಿಧಿಯ ತರಂಗಗಳ ಸೋಂಕಿನಿಂದ ಹರ್ಷಗೊಂಡು ಸ್ಪಂದನಗೊಳ್ಳುತ್ತಲಿವೆ ಎಂಬಂತೆ ಆಯ್ತು. ಇಲ್ಲವಾಗಿದ್ದರೆ ಆ ಬಗೆಯ ದಿವ್ಯವಾದ ಮಾಧುರ್ಯವು ಉಂಟಾಗಲು ಶಕ್ಯವಿದ್ದಿತೆ? ವೀಣೆಯ ಹಾಡಿನಿಂದ ಪುಲಕಿತವಾದ ಮೆಲ್ಗಾಳಿ ಆ ಇಂಚರದ ಸೊಬಗನ್ನು ಸುತ್ತಲು ಸೂಸುತ್ತ ಸುಳಿಯಲಾರಂಭಿಸಿತು. ರಾಜಪುತ್ರಿಯ ಕೋಣೆಯ ಎದುರಿಗಿರುವ ಕೋಣೆಯಲ್ಲಿ ಎಚ್ಚತ್ತು ಕುಳಿತಿದ್ದ ಪದ್ಮನಾಭನು ಆ ಮಧುರ ನಾದದಲ್ಲಿ ತಲ್ಲೀನನಾದನು. ತಾನು ಹಾಡಿದ ಹಾಡನ್ನು ತಾನು ಹೇಳಿದ ರೀತಿಯಲ್ಲಿ ವೀಣೆ ಅಷ್ಟೊಂದು ಸವಿಯಾಗಿ ನುಡಿಸುತ್ತಿರುವುದು ಆತ-ನಲ್ಲಿ ಆಶ್ಚರ್ಯವನ್ನು ಉಂಟುಮಾಡಿತು. "ಅಬ್ಬಾ, ಈ ಹಾಡಿನ ಪಾವಿ-ತ್ರ್ಯವು, ಗಾಂಭೀರ್ಯವು ಇಷ್ಟೊಂದು ಇರುವುದೆ? ನಿತ್ಯವೂ ಈ ಹಾಡನ್ನು ನಾನು ಹಾಡುವೆನು. ಆದರೆ ಇಷ್ಟೊಂದು ಪಾವನತೆ ಇದರಲ್ಲಿ ಇರುವುದೆಂಬು ದರ ಅರಿವು ನನಗೆ ಈ ವರೆಗೂ ಇರಲಿಲ್ಲ. ಆಳವಾದ ಭಾವವನ್ನು ಇಷ್ಟು ಆಕರ್ಷಕವಾಗಿ ವ್ಯಕ್ತಗೊಳಿಸುವ ಕೌಶಲ್ಯವನ್ನು ತನ್ನ ಬೆರಳುಗಳಲ್ಲಿ ತಂದು ಕೊಂಡಿರುವ ಈ ಪುಣ್ಯವ್ಯಕ್ತಿ ಯಾರಿರಬಹುದು?" ಎನ್ನುತ್ತ ಆತನು ಆನಂದ ಮಗ್ನನಾದನು, ಮುಂದೆ ಸ್ವಲ್ಪ ಹೊತ್ತಿನಲ್ಲಿ ಉಪಾಸನೆಯ ಗಂಟೆ ಆಯ್ತು. ರಾಜಪುತ್ರಿ ವೀಣೆಯನ್ನು ಕೆಳಗಿಟ್ಟು ಉಪಾಸನಾ ಸ್ಥಳಕ್ಕೆ ಬಂದಳು. ಪದ್ಮ-ನಾಭನೂ ಬಂದನು. ಅರಮನೆಯ ಎಲ್ಲ ಜನರೂ ಬಂದರು

ಪದ್ಮನಾಭನು ಬಿಲಹರಿ ರಾಗದಲ್ಲಿ ಈ ಕೆಳಗಿನ ಹಾಡನ್ನು ಹಾಡಿದನು.

ಕುಶಲವಿಹುದು ಸಂಸಾರದೊಳು<br>
ವಿಶದಾಶಯದ ಸುಧೀರನಿಗೆ ||ಪಲ್ಲವಿ||

ವಿಮಲಮನದ ಸೌಂದರ್ಯಕೊಲಿದು ಸಂ-<br>
ಭ್ರಮದಲಿ ಕುಣಿಕುಣಿವನು ಶಿವನು ||<br>
ಅಮಿತಮಹಿಮಾನಂದ ಜಲಧಿಯಲಿ<br>
ಅಮಲ ಹೃದಯನೋಲಾಡುವನು! ||೧||

- ಪರಸುಖ-ಶೀತಲದಭಯದಾನದ-<br>
ಕ್ಕರತೆಗೆ ಮೆಚ್ಚುವನು ಪರಾತ್ಪರನು ||

ಪರಶಿವನಾ ಸಂತಸದ ಹೊನಲ ತುಂ-
ತುರುಗಳು ಸೋಂಕವೆ ಶುಚಿಹೃದಯನನು ? ||೨||

ವಿರಜನ ಮನವು ಪರಂಜ್ಯೋತಿಯ ಮಂ-
ದಿರವಾ ಜ್ಯೋತಿಯ ಬೆಳಕಿನಲಿ ||
ಪರಹಿತರತನಾನಂದ ವೃತ್ತಿಯಿಂ-
ದಿರುವನಾತ್ಮ-ಕರ್ತವ್ಯದಲಿ ||೩||

ಬಳಿಕ ಶಿವನಾಥನು ಕೆಲವು ಸಂಸ್ಕೃತ ಶ್ಲೋಕಗಳನ್ನು ಹೇಳಿದನು. ಅನಂತರ ಗುರುದೇವನು ಗಂಭೀರ ಧ್ವನಿಯಲ್ಲಿ :—

यस्मिन् सर्वे यत: सर्वे य: सर्वे सर्वतश्च य: ।
यश्च सर्वमयो देवस्तस्मै सर्वात्मने नम: ॥

ಈ ಶ್ಲೋಕವನ್ನು ಹಾಡಿದರು. ಉಪಾಸನೆ ಮುಗಿಯಿತು. ಗುರುದೇವನು ಎದ್ದು ಸ್ನಾನಕ್ಕೆ ಹೊರಟರು.

ಪದ್ಮನಾಭನು ತನ್ನ ಕೋಣೆಗೆ ತಿರುಗಿ ಬಂದು ಮುಂದಿನ ಅಂಗಳದಲ್ಲಿ ತಡೆದು ಪ್ರಾತಃಸಮಯದ ಶಾಂತಿಯನ್ನು ಸವಿಯುತ್ತ ನಿಂತನು. ಸ್ವಲ್ಪ ಹೊತ್ತಿನಲ್ಲಿ ಎದುರಿನ ಕೋಣೆಯಲ್ಲಿ ಮತ್ತೆ ವೀಣೆ ನುಡಿಯಲಾರಂಭಿಸಿತು. ಪದ್ಮನಾಭನು ಮನಸ್ಸುಗೊಟ್ಟು ಕೇಳಿದನು. “ ಬಿಲಹರಿ ರಾಗದ ತಿರುಳು ! ಆ ರಾಗದ ಸರ್ವಸ್ವವು ! ನಾನು ಆಗ ಉಪಾಸನೆಯ ಸಮಯದಲ್ಲಿ ಹಾಡಿದ ಹಾಡಿನ ಪಲ್ಲವಿಯನ್ನಷ್ಟೇ ಈಗ ಈ ವೀಣೆ ಆಲಾಪಿಸುತ್ತದೆ. ಆದರೆ ಆ ಇಡಿಯ ಹಾಡಿನ ಮರ್ಮವು ಪಲ್ಲವಿಯೊಂದರಲ್ಲಿ ಉಕ್ಕುತ್ತಿದೆ! ಏನು ಕೌಶಲ್ಯವಿದೆ! ಏನು ಭಾವತನ್ಮಯತೆ ! ಗುರುದೇವನ ಕೋಣೆ ದೂರದಲ್ಲಿದೆ. ಅವರಿಗೆ ಈ ವೀಣಾನಾದವು ಕೇಳಿಸಲಾರದು. ಕೇಳಿಸಿದ್ದರೆ ಆ ಸಂಗೀತಾಚಾರ್ಯರು ಬಂದು ಈ ವ್ಯಕ್ತಿಯನ್ನು ಆಶೀರ್ವದಿಸದೆ ಇರುತ್ತಿದ್ದಿಲ್ಲ. ನಾನು ವೀಣೆಯನ್ನು ನುಡಿಸಿದರೆ ಅದನ್ನು ಕೇಳಿ ಅವರಿಗೆ ಅಷ್ಟು ಆನಂದವು! ಇದನ್ನು ಕೇಳಿದರಂತು ಅವರ ಆನಂದಕ್ಕೆ ಪಾರವೇ ಇಲ್ಲದಾಗುವುದು. ಭಗವನ್ ಗುರುದೇವಾ, ನನಗಾಗುವ ಈ ಆನಂದವು ನಿಮ್ಮದು, ನಿಮ್ಮ ಅಡಿಗೆ ಸಮರ್ಪಿತವು! ” ಎಂದು

ಆತನು ತನ್ನ ಆನಂದವನ್ನು ಅತ್ಯಂತ ಭಕ್ತಿಯಿಂದ ಗುರುವಿಗೆ ಅರ್ಪಿಸಿದನು. ವೀಣೆ ನಿಂತಿತು. ಪದ್ಮನಾಭನು ಸ್ನಾನಕ್ಕೆ ಹೋದನು.

ಸ್ನಾನ ದೇವತಾರ್ಚನೆಗಳನ್ನು ಮುಗಿಸಿ ಪದ್ಮನಾಭನು ಗುರುದೇವನ ಕೋಣೆಗೆ ಬಂದು ಭಕ್ತಿನಮ್ರನಾಗಿ ಅವರಿಗೆ ನಮಸ್ಕಾರ ಮಾಡಿ ಕೈಮುಗಿದು ಕೊಂಡು ನಿಂತನು. ಗುರುದೇವನು ಆತನನ್ನು ಪ್ರೇಮದಿಂದ ತಮ್ಮ ಹತ್ತಿರ ಕುಳ್ಳಿರಿಸಿಕೊಂಡರು ಮತ್ತು ಎಂದರು,

"ಮಗು, ಪದ್ಮನಾಭಾ, ರುದ್ರನಾಯಕನಂತಹ ಉಪದ್ರವಿಯನ್ನು ವಶ-ಗೊಳಿಸಿ ಅವನನ್ನು ಸನ್ಮಾರ್ಗದಲ್ಲಿ ಇರಿಸಿ ಮಹತ್ತ್ವದ ಕಾರ್ಯವನ್ನು ನೆರವೇ ರಿಸಿದೆ. ಈ ಕೆಲಸದಿಂದ ನೀನು ಪ್ರಜಾವತ್ಸಲರಾದ ಮಹಾರಾಜರ ಮೆಚ್ಚಿಕೆ ಯನ್ನು ಪಡೆದೆ. ಮಹಾರಾಜರು ನಿನ್ನೆ ರಾತ್ರಿ ಮತ್ತು ಇದೇ ಈಗ ನನ್ನೆಡೆಗೆ ಬಂದಿದ್ದರು ನಿನ್ನ ವಿಷಯದಲ್ಲಿ ಅವರು ಅನುರಾಗವನ್ನು, ಆದರವನ್ನು ಮತ್ತು ಅಭಿಮಾನವನ್ನು ವ್ಯಕ್ತಗೊಳಿಸಿದರು. ಇನ್ನು ಮುಂದೆ ನೀನು ಹೆಚ್ಚಿನ ಹೊಣೆ ಯನ್ನು ವಹಿಸಬೇಕಾಗುವುದು. ಇಂದಿನ ವರೆಗೆ ನೀನು ಕರ್ತವ್ಯದಕ್ಷನಾಗಿ ಇದ್ದುದರಿಂದ ನಿನಗೊಪ್ಪಿಸಿದ ಕೆಲಸಗಳನ್ನು ನೀನು ತೃಪ್ತಿಕರವಾಗಿ ನೆರವೇರಿ ಸಿದೆ. ಶೀಲವು ನಿನ್ನಲ್ಲಿ ಸಮೃದ್ಧವಾಗಿದೆ, ಅಜೇಯವಾದ ಮನೋದಾರ್ಢ್ಯವು ನಿನಗಿದೆ, ಪ್ರಭಾವಿಯಾದ ಬುದ್ಧಿಶಕ್ತಿ ಇದೆ, ಮತ್ತು ಅದಕ್ಕನುಗುಣವಾದ ಶರೀರಸಂಪತ್ತೂ ಇದೆ. ಇವೆಲ್ಲವನ್ನು ಸುಂದರವಾಗಿಸುವ ಸತ್ಯನಿಷ್ಠೆಯೂ ನಮ್ರತೆಯೂ ಇವೆ. ಇದುವೆ ನಿಜವಾದ ಸಂಪತ್ತು. ಇನ್ನು ಮುಂದೆ ಯಾವ ಹೊಣೆಯೆ ಬರಲಿ, ಇದನ್ನು ಉತ್ಕೃಷ್ಟವಾಗಿ ನಿರ್ವಹಿಸಲು ಈ ಗುಣಗಳೇ ನಿನಗೆ ಸಹಾಯವಾಗುವುವು. ಮಗನೆ, ಕರ್ತವ್ಯನಿಷ್ಠನಾಗಿದ್ದು ಎಲ್ಲರ ವಿಶ್ವಾ-ಸಕ್ಕೂ ಪಾತ್ರವಾಗು!"

"ಭಗವನ್, ನನ್ನಲ್ಲಿದ್ದುದೆಲ್ಲವು ತಮ್ಮ ಪ್ರೇಮದ ಫಲವು. ಇನ್ನು ಮುಂದಿನ ಶ್ರೇಯೋಭಿವೃದ್ಧಿಗೆ ತಮ್ಮ ಕೃಪೆಯೆ ಸಹಾಯವು. ಭಗವನ್, ನನ್ನ ಜೀವವು ತಮ್ಮ ಅಡಿಗೆ ಮುಡುಪು. ತಮ್ಮ ಆಶೀರ್ವಾದವು ನನ್ನನ್ನು ಯಾವಾಗಲೂ ಕರ್ತವ್ಯ ಪಥದಲ್ಲಿ ನಡೆಯಿಸಲಿ!"

"ಮಗನೆ, ಪರಮಾತ್ಮನು ನಿನ್ನನ್ನು ನಿರಂತರವೂ ಸತ್ಪಥದಲ್ಲಿ ನಡೆಯಿ-

ಸಲಿ! ಪದ್ಮನಾಭಾ, ಮಹಾರಾಜರು ನಿನ್ನನ್ನು ಕುರಿತು ನನ್ನೊಡನೆ ಇನ್ನೂ ಮಾತನಾಡಲಿರುವರು. ಆ ಮೊದಲು ಅವರು ನಿನ್ನನ್ನು ಕಾಣಬಹುದು."

ಗುರುದೇವನ ಮಾತು ಮುಗಿವಷ್ಟರಲ್ಲಿ ಸೇವಕನೊಬ್ಬನು ಬಂದು ಪದ್ಮನಾಭನ ಕಡೆಗೆ ನೋಡುತ್ತ, "ಮಹಾರಾಜರು ತಮ್ಮನ್ನು ಕಾಣಬಯಸುವರು" ಎಂದನು. ಪದ್ಮನಾಭನು ಗುರುದೇವನ ಮುಖದ ಕಡೆಗೆ ನೋಡಿದನು. "ಹೋಗಿ ಬಾ, ಪದ್ಮನಾಭಾ," ಎಂದು ಅವರು ನುಡಿದರು. ಆತನು ಸೇವಕನನ್ನು ಹಿಂಬಾಲಿಸಿದನು.

ರಾಜನು ಮಗಳೊಡನೆ ಮಾತನಾಡುತ್ತ ಅವಳ ಕೋಣೆಯಲ್ಲಿ ಕುಳಿತಿದ್ದನು ಪದ್ಮನಾಭನು ಅಲ್ಲಿಗೆ ಬಂದೊಡನೆ, "ನನ್ನ ಸ್ವಾಮಿ" ಎಂದು ಮನಸ್ಸಿನಲ್ಲಿ ಎನ್ನುತ್ತ ರಾಜಪುತ್ರಿ ಎದ್ದು ತಂದೆಯ ಹಿಂಬದಿಯಲ್ಲಿ ನಿಂತಳು. ಏನು ಅವಳ ಆ ನಗೆಮೊಗದ ಚೆಲುವು! ಸಾತ್ತ್ವಿಕ ಆನಂದದ ಮಾಧುರ್ಯವು ಇಷ್ಟೊಂದು ಇರುವುದಲ್ಲವೆ? ಪದ್ಮನಾಭನು ರಾಜನಿಗೆ ವಿನಯದಿಂದ ನಮಸ್ಕರಿಸಿದನು. ರಾಜನು ಆತನನ್ನು ಪ್ರೇಮದಿಂದ ಬಳಿಯಲ್ಲಿ ಕುಳ್ಳಿರಿಸಿಕೊಂಡು ಎಂದನು,—

"ಕುಮಾರಾ, ನೀನು ನಿನ್ನ ಗುಣಗಳಿಂದ ನನ್ನನ್ನು ಮೆಚ್ಚಿಸಿದೆ. ನಿನ್ನ ಶೀಲದ ಪ್ರಭಾವವು ಜೀವಗಳ್ಳರಾದ ಹೇಡಿಗಳನ್ನು ವೀರರಾಗಿಸಿತು. ನಿನ್ನ ಧೈರ್ಯವು ರುದ್ರನಾಯಕನಂತಹ ಸಾಹಸಿಯನ್ನು ಬೆರಗುಗೊಳಿಸಿತು. ನಿನ್ನ ಸಾತ್ತ್ವಿಕತೆ ಆ ಉಪದ್ರವಿಯನ್ನು ಸಾಧುವಾಗಿಸಿತು. ಅಂದಿನ ಸ್ವಾರ್ಥಾಂಧನೂ ಲೋಕಕಂಟಕನೂ ಇಂದು ತನ್ನ ಸರ್ವಸ್ವವನ್ನು ಗುರುದೇವನ ಪಾದದಲ್ಲಿ ಅರ್ಪಿಸಿ ಲೋಕಸೇವಕನಾಗಲು ಮನಮುಟ್ಟಿ ಯತ್ನಿಸುತ್ತಿರುವನು. ಪದ್ಮನಾಭಾ, ನೀನು ಧನ್ಯನು! ನಿನ್ನನ್ನು ನಾನು ನನ್ನವನೆಂದು ಎಣಿಸಬಹುದೆ?"

"ರಾಜರ್ಷಿ ವಿಜಯಚಂದ್ರಮಹಾರಾಜರ ಇಷ್ಟೊಂದು ಪ್ರೇಮಕ್ಕೆ ಅರ್ಹನಾಗಿರುವ ಭಾಗ್ಯವು ನನಗೆ ಇರುವುದೆ?"

"ಗುರುದೇವನಿಗೆ ನೀನು ಮಾನಸಪುತ್ರನು, ಪದ್ಮನಾಭಾ!"

"ಆ ಮಹಾತ್ಮರು ನನ್ನನ್ನು ಹಾಗೆ ತಿಳಿದಿರುವುದು ನಿಜವು. ಅವರು ನನ್ನ ದೈವತವು!"

"ನಾನು?"

"ನನ್ನ ಸ್ವಾಮಿ!"

" ನೀನು ನನ್ನವನಾದೆ, ಪದ್ಮನಾಭಾ ! "

" ಗುರುದೇವನ ಸೇವೆ ನನಗೆ ಲಭಿಸಿದಂತೆ ಮಹಾರಾಜರ ಸೇವೆ ನನಗೆ ದೊರೆವುದು ! ನಾನು ಧನ್ಯನು ! "

" ರುದ್ರನಾಯಕನಂತಹ ಪ್ರಜಾಪೀಡಕನನ್ನು ನೀನು ಸನ್ಮಾರ್ಗದಲ್ಲಿ ಇರಿಸಿದೆ. ಇದು ನೀನು ನನಗೆ ಸಲ್ಲಿಸಿದ ಘನವಾದ ಸೇವೆ. "

" ರುದ್ರನಾಯಕನನ್ನು ಸನ್ಮಾರ್ಗದಲ್ಲಿ ತಂದಿರಿಸಿದುದು ಗುರುದೇವನ ಅದ್ಭುತ ಪ್ರೇಮಶಕ್ತಿ. "

" ಅಂತಹ ಗುರುದೇವನ ಅಡಿಗೆ ತನ್ನ ಜೀವನವನ್ನು ಮುಡುಪಾಗಿಸಿದ ವೀರನು ನನ್ನವನಾದುದು ನನಗೆ ಅಭಿಮಾನದ ಮಾತು, ಆನಂದದ ಮಾತು. ಏನೆನ್ನುವೆ, ರಾಜಲಕ್ಷ್ಮೀ ? "

" ಅಪ್ಪಾ, ಸದ್ವಸ್ತು ತನ್ನದಾದರೆ ಯಾರಿಗೆ ಅಭಿಮಾನವಾಗದು, ಆನಂದವಾಗದು ? "

ಪದ್ಮನಾಭನ ಅಂತಃಕರಣದಲ್ಲಿ ವಿದ್ಯುತ್ತು ಸ್ಫುರಿಸಿದಂತಾಯ್ತು. ಆತನು ರಾಜಪುತ್ರಿಯ ಮುಖದ ಕಡೆಗೆ ನೋಡಿದನು. ಇಬ್ಬರ ದೃಷ್ಟಿಗಳೂ ಕೂಡಿದುವು. ಎರಡು ಹೃದಯಗಳು ಒಂದಾದುವು. ಸೂಕ್ಷ್ಮದೃಷ್ಟಿಯ ರಾಜನಿಗೆ ಇದು ಗೊತ್ತಾಗದೆ ಇರಲಿಲ್ಲ.

ಬಳಿಕ ರಾಜನೆಂದನು, " ನಾನು ಈಗ ಗುರುದೇವನನ್ನು ಕಾಣಲು ಹೋಗಬೇಕು. ರಾಜಲಕ್ಷ್ಮೀ, ಪದ್ಮನಾಭನು ನಮ್ಮ ಅತಿಥಿ. "

" ಅಪ್ಪಾ, ಅವರು ನಮ್ಮವರು. "

" ಅಹುದು, ತಾಯೀ. ಎಲ್ಲವೂ ಆತನಿಗೆ ಇಲ್ಲಿ ಸ್ವಕೀಯವಾಗಬೇಕು. ನಮ್ಮ ಪುಸ್ತಕಾಲಯವನ್ನು ತೋರಿಸು. ಬೇಕಾದ ಪುಸ್ತಕವನ್ನು ಆತನು ತೆಗೆದುಕೊಂಡು ಓದಲಿ. ಆತನು ಇಷ್ಟಪಟ್ಟರೆ ಹೂದೋಟದಲ್ಲಿ ತಿರುಗಿ ಬನ್ನಿರಿ. ಬೇಕಾದರೆ ನೀನು ಬರೆದ ಚಿತ್ರಗಳನ್ನು ತೋರಿಸು. ಪದ್ಮನಾಭಾ, ನೀನು ನಮ್ಮವನಾಗಿರುವೆ. ಸ್ವಕೀಯತೆ ಇರುವಲ್ಲಿ ಸಂಕೋಚಕ್ಕೆ ಅವಕಾಶವು ಇರಲಾಗದು. ನಾನು ಗುರುದೇವನ ಬಳಿಗೆ ಹೋಗುವೆನು. ಅವರು ನನಗಾಗಿ ಕಾಯುತ್ತಿರಬಹುದು. "

ರಾಜನು ಗುರುದೇವನ ಬಳಿಗೆ ಹೋದನು

೨೪

“ಪ್ರಾತಃಕಾಲವು ಈಗ. ಹೂದೋಟವು ಅರಳಿದ ಮತ್ತು ಅರಳು ತ್ತಿರುವ ಹೂಗಳಿಂದ ಬಲು ಚೆಂದವಾಗಿರುತ್ತದೆ. ನಾವು ಅಲ್ಲಿಗೆ ಹೋಗ ಬಹುದೆ?” ರಾಜಕುಮಾರಿ ಪದ್ಮನಾಭನನ್ನು ಕೇಳಿದಳು.

“ಹೋಗಬಹುದು; ಆದರೆ?”

“ಅಥಿತಿಗೆ ಮತ್ತೇನು ಇಚ್ಛೆ?”

“ಬೆಳಗಿನ ಸಮಯದಲ್ಲಿ ವೀಣೆ ನುಡಿವುದನ್ನು ಕೇಳಿದೆನು. ನಾದವು ಈ ಕೋಣೆಯಿಂದ ಬರುತ್ತಿದ್ದಿತು. ನಾನು ಹಾಡಿದ ಹಾಡು. ರಾಗವೂ ರೀತಿಯೂ ನನ್ನವೇ ಆಗಿದ್ದುವು. ಆದರೆ ಮಾಧುರ್ಯವು—”

“ನಿಮ್ಮ ಮಾಧುರ್ಯದಷ್ಟು ಇರುವುದು ಶಕ್ಯವಿಲ್ಲ, ನಾನು ಒಪ್ಪುತ್ತೇನೆ.”

“ಹಾಗಲ್ಲ, ವೀಣೆಯ ಮಾಧುರ್ಯವು ಅನುಪಮವಾಗಿತ್ತು. ನನ್ನ ಹಾಡಿನಲ್ಲಿ ಇಷ್ಟೊಂದು ಗಾಂಭೀರ್ಯವು, ಇಷ್ಟೊಂದು ಪಾವನತೆ, ಈಬಗೆಯ ಹೃದಯಸ್ಪರ್ಶಿಯಾದ ಭಾವವು ಉಂಟೆಂಬುದನ್ನು ವೀಣೆಯನ್ನು ಕೇಳಿದ ಬಳಿಕವೇ ಅರಿತೆನು. ವೀಣೆಯನ್ನು ನುಡಿಯಿಸುವ ಬೆರಳುಗಳ ಕೌಶಲ್ಯವನ್ನು ವರ್ಣಿಸಲು, ರಾಜಪುತ್ರಿ, ನನ್ನಲ್ಲಿ ಶಬ್ದಗಳಿಲ್ಲ. ವೀಣೆಯನ್ನು ನುಡಿಯಿಸಿದ ವ್ಯಕ್ತಿ ಯಾರೆಂಬುದನ್ನು ನಾನು ತಿಳಿಯಬಹುದೆ?”

“ನೀವು ಹಾಡಿದಿರಿ. ನಿಮ್ಮ ಹಾಡಿನಲ್ಲಿ ನಿಮ್ಮ ಹೃದಯದ ಪಾವಿತ್ರ್ಯ ಗಾಂಭೀರ್ಯ, ಮಾಧುರ್ಯ, ಭಕ್ತಿ ತುಂಬಿ ಸೂಸಿದುವು. ನನ್ನ ಹೃದಯ ವನ್ನು ಬಲವಾಗಿ ಸೆಳೆದುವು. ನೀವು ಹಾಡಿದ ರೀತಿಯಲ್ಲಿಯೆ ನಿಮ್ಮ ಹಾಡನ್ನು ನನ್ನ ವೀಣೆಯಲ್ಲಿ ನುಡಿಯಿಸಲು ನಾನು ಪ್ರಯತ್ನಿಸಿದೆನು. ನನ್ನ ಪ್ರಯತ್ನವು ಸ್ವಲ್ಪಮಟ್ಟಿಗಾದರೂ ಸಫಲವಾಯ್ತೆ?”

“ನಾನು ಹೇಳುವ ಮಾತು ನನ್ನ ಅಂತಃಕರಣದಿಂದ ಬರುತ್ತಿದೆ, ರಾಜ ಪುತ್ರೀ, ವೀಣೆಯನ್ನು ಕೇಳಿದ ನಾನು ಆನಂದಪರವಶನಾದೆನು. ಇನ್ನು ಒಮ್ಮೆ ಯಾದರೂ ಕೇಳಬೇಕೆಂದು ನನ್ನ ಇಚ್ಛೆ. ಈ ಇಚ್ಛೆ ಸಫಲವಾಗಬಹು ದಲ್ಲವೆ?”

"ನಿಮ್ಮ ಇಚ್ಛೆ ಇದ್ದರೆ ನುಡಿಯಿಸುವೆನು," ಎಂದು ರಾಜಲಕ್ಷ್ಮಿ ವೀಣೆಯನ್ನು ತೆಗೆದುಕೊಂಡಳು, ಮತ್ತು, 'ವೀಣೆಯೆ, ನನ್ನ ಸ್ವಾಮಿಯ ಹೃದಯವನ್ನು ಸೆರೆಗೊಂಡು ನನ್ನ ಅಧೀನವಾಗಿಸು,' ಎಂದು ಮನಸ್ಸಿನಲ್ಲಿ ವೀಣೆಯನ್ನು ಪ್ರಾರ್ಥಿಸಿ ತಂತಿಯನ್ನು ಮೀಟಿದಳು. ಕ್ಷಣಾರ್ಧದಲ್ಲಿ ತಂತಿಗಳು ಚೈತನ್ಯಪೂರ್ಣವಾದುವು!

ಬೆಳಗಿನಲ್ಲಿಯ ಕೌಶಲ್ಯಕ್ಕಿಂತ ಈಗಿನ ಅವಳ ಕೌಶಲ್ಯವು ಹೆಚ್ಚು ಪ್ರಭಾವಿಯಾಗಿತ್ತು. ಭಾವತನ್ಮಯತೆ ಅಪೂರ್ವವಾಗಿತ್ತು. ನಿರ್ಮಲ ಹೃದಯದ ಅನುರಾಗದ ಮಾಧುರ್ಯವನ್ನೇ ವೀಣೆ ರೂಪಿಸುತ್ತಿದ್ದಿತು. ಪದ್ಮನಾಭನು ಕೇಳುತ್ತ ತಲ್ಲೀನನಾದನು. ಆನಂದಪರವಶನಾದನು. ಆತನ ಮುಖದ ಸೌಂದರ್ಯವು ಅತ್ಯಂತ ಮೋಹಕವಾಯ್ತು. ನೋಡಿ ರಾಜಕನ್ಯೆ ಮನಸ್ಸಿನಲ್ಲಿ "ನಾನು ಧನ್ಯೆ, ಈ ಸೌಂದರ್ಯನಿಧಿ ನನ್ನ ವಶವಾಯ್ತು!" ಎಂದಳು. ಹಾಡು ಮುಗಿಯಿತು.

"ರಾಜಪುತ್ರೀ!" ಪದ್ಮನಾಭನು ಎಂದನು.

"ನನ್ನ ಹೆಸರು ರಾಜಲಕ್ಷ್ಮಿ!"

"ಈ ಹೆಸರಿನಿಂದ ನಾನು ಕರೆಯಬಹುದೆ?"

"ಏಕೆ ಕರೆಯಕೂಡದು?"

"ನನಗೆ ಅಧಿಕಾರವು ಉಂಟೆ?"

"ಇದೋ, ನಿಮಗೆ ಅಧಿಕಾರವು!" ಎನ್ನುತ್ತ ರಾಜಲಕ್ಷ್ಮಿ ಮುಗಿದ ಕೈಗಳನ್ನು ಮುಂದೆ ಚಾಚಿದಳು. ಪದ್ಮನಾಭನು ರಾಜಲಕ್ಷ್ಮಿಯ ಆ ಕೈಗಳನ್ನು ತನ್ನ ಕೈಗಳಿಂದ ಹಿಡಿದು ಅವಕ್ಕೆ ಪ್ರೇಮಮುದ್ರೆಯನ್ನು ಇರಿಸಿದನು. ಒಬ್ಬರನ್ನೊಬ್ಬರು ತಮ್ಮ ಕಣ್ಣುಗಳಿಂದ ಪ್ರೇಮವನ್ನು ಸೂಸುತ್ತ ನೋಡಿಯೇ ನೋಡಿದರು. ಸ್ವಲ್ಪ ಹೊತ್ತಾದ ಬಳಿಕ ಪದ್ಮನಾಭನು, "ರಾಜಲಕ್ಷ್ಮೀ!" ಎಂದನು.

"ನನ್ನ ಹೆಸರು ಎಷ್ಟು ಸವಿಯಾಗಿರುವುದಲ್ಲ!"

"ಅಹುದು, ನುಡಿವ ನಾಲಗೆಗೆ ಅದು ಅಮೃತವು!"

"ನನ್ನ ಸ್ವಾಮಿ ನುಡಿದುದನ್ನು ಕೇಳುವ ಕಿವಿಗೆ ಅದು ಅಮೃತವು!"

" ರಾಜಲಕ್ಷ್ಮಿ, ನಾನು ನಿರ್ಧನನು; ನನ್ನಲ್ಲಿ ಯಾವ ಯೋಗ್ಯತೆಯನ್ನು ನೀನು ಕಂಡೆ ? "

" ದುರಾರಾಧ್ಯೆಯಾದ ರಾಜಲಕ್ಷ್ಮಿಯ ಹೃದಯವನ್ನು ಸೆಳೆದ ಮಹಾತ್ಮನು ನಿರ್ಧನನಂತೆ! ಸಧನನೆಂಬವನು ಯಾವನು ಇನ್ನು? ಪಾರ್ಥಿವ ಸಂಪತ್ತಿಗೆ ಮೋಹಗೊಳ್ಳುವವಳಲ್ಲ ರಾಜರ್ಷಿ ವಿಜಯಚಂದ್ರ ಮಹಾರಾಜರ ಪುತ್ರಿ! ರಾಜಲಕ್ಷ್ಮಿಗೆ ಬೇಕಾಗಿದ್ದುದು ದೈವೀ ಸಂಪತ್ತು. ನನ್ನ ಸ್ವಾಮಿ ಆ ದೈವೀ ಸಂಪತ್ತಿನ ನಿಧಿ! ಲೋಕಕಂಟಕನಾಗಿದ್ದ ರುದ್ರನಾಯಕನನ್ನು ಲೋಕಸೇವಕನಾಗಿ ಮಾರ್ಪಡಿಸಿದ ಸಾಮರ್ಥ್ಯಸಮುದಾಯವು ನನ್ನ ಸ್ವಾಮಿ; ತನ್ನನ್ನು ಕೊಲ್ಲಿಸಲು ಪ್ರಯತ್ನಿಸಿದ ವಿವೇಕಮೂಢನಾಗಿದ್ದ ಸೇನಾಪತಿಯ ಅಪರಾಧವನ್ನು ಕ್ಷಮಿಸಿ ಅವನನ್ನು ತನ್ನ ತಂದೆಯ ಸ್ಥಾನದಲ್ಲಿ ಇರಿಸಿದ ಸೌಹಾರ್ದಸಿಂಧು ನನ್ನ ಸ್ವಾಮಿ; ಮಹಾ ತಪಸ್ವಿ ಶ್ರೀಸತ್ಯಾನಂದ ಗುರುದೇವನ ಮಾನಸಪುತ್ರನಾಗಿರುವ ಸೌಭಾಗ್ಯವುಳ್ಳ ಸತ್ತ್ವನಿಧಿ ನನ್ನ ಸ್ವಾಮಿ; ರಾಜರ್ಷಿ ವಿಜಯಚಂದ್ರ ಮಹಾರಾಜರ ಪ್ರೇಮಾಂಬುಧಿಯಲ್ಲಿ ತರಂಗಿಸುವ ಗುಣೋಚ್ಚಯವು ನನ್ನ ಸ್ವಾಮಿ; ರಾಜಲಕ್ಷ್ಮಿಯನ್ನು ಕೃತಾರ್ಥೆಯಾಗಿಸಿದ ಪುಣ್ಯಪುಂಜವು ನನ್ನ ಸ್ವಾಮಿ ! "

" ರಾಜಲಕ್ಷ್ಮಿಯ ಅಪಾರವಾದ ಪ್ರೇಮಸಾಗರಕ್ಕೆ ನನ್ನನ್ನು ಸ್ವಾಮಿಯಾಗಿಸಿದ ನನ್ನ ಗುರುವೆ, ನಿಮ್ಮ ಉಪಕಾರವು ಅನಂತವಾಗಿರುವುದು ! "

" ಜಯ, ಗುರುದೇವ!" ಪ್ರೇಮಿಗಳಿಬ್ಬರೂ ಏಕಕಾಲದಲ್ಲಿ ನುಡಿದರು.



